

12th Century's
Enlightment Technic
and Evolution

ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು ವಿರಚಿತ

# ನಿಜಸುಖಿ

ಸಂಪಾದಕರು

**ಬಸವರಾಜ ಸ್ವಾಮಿ**

12th Century's
Enlightment Technic
and Evolution

# ನಿಜಸುಖಿ

ಲೇಖಕರು
**ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು**
**ಡಬ್ಬೇರು ಮಡುವು**

ಸಂಪಾದಕರು
**ಬಸವರಾಜಸ್ವಾಮಿ**
ರಾಯಚೂರು

ಪ್ರಕಾಶಕರು
**ಶ್ರೀ ಬಸವಸೇವಾ ಪ್ರತಿಷ್ಠಾನ**
ನಂ.12-7-196 ಸುದ್ದಿಮೂಲ ಕಾರ್ಯಾಲಯ
ಸಿಯಾತಲಾಬ ಗಂಜ್ ಏರಿಯಾ
ರಾಯಚೂರು-584102

**ನಿಜಸುಖಿ**

**ವಚನಾನುಭಾವ**

Nijasukhi Vachananubhava Authour : Sadguru Sri Vidyananda Saharanaru
Dabberumaduvu Tq. Lingsugur , Dt. Raichur
Edited by : Basavaraj Swamy , Raichur
Mobile : 9980553750

ಲೇಖಕರು
**ಸದ್ಗುರು ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು**

ಸಂಪಾದಕರು
**ಬಸವರಾಜ ಸ್ವಾಮಿ,**
ರಾಯಚೂರು

ಮಿಂಚಂಚೆ
suddimoola@gmail.com

ಪ್ರಕಾಶಕರು
**ಶ್ರೀ ಬಸವಸೇವಾ ಪ್ರತಿಷ್ಠಾನ**
ನಂ.12-7-196 ಸುದ್ದಿಮೂಲ ಕಾರ್ಯಾಲಯ
ಸಿಯಾತಲಾಬ ಗಂಜ್ ಏರಿಯಾ
ರಾಯಚೂರು- 584102



ಬೆಲೆ : 150/-

ಪ್ರತಿಗಳು : 500

ಮುದ್ರಣ : ಪ್ರಥಮ ಮುದ್ರಣ ಜೂನ್ 2023

ಬಳಸಿದ ಕಾಗದ : 70 ಜಿ.ಎಸ್.ಎನ್.ಎಸ್ ಮ್ಯಾಪಲಿತೋ

ಆಕಾರ : ಡೆಮಿ 1/8

ಪುಟಗಳು : 101+ vii

ಮುಖ ಪುಟ : ಮುರಳೀಧರ ವಿ. ರಾಠೋಡ್ ಬೆಂಗಳೂರು

ಮುದ್ರಣ
ಟ್ರಿನಿಟಿ ಅಕಾಡೆಮಿ - ಬೆಂಗಳೂರು

# ಓದುವ ಮುನ್ನ ....

ದ್ವೈತ, ದ್ವೈತಾದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಿವಶಕ್ತಿ ವಿಶಿಷ್ಟಾದ್ವೈತ, ಮುಂತಾದ ಸಿದ್ಧಾಂತಗಳು ಭಾರತದಲ್ಲಿ ಪ್ರಚಲಿತದಲ್ಲಿವೆ. ಪ್ರತಿ ದೇಹದಲ್ಲಿರುವ ಶಕ್ತಿಯನ್ನು ಆಯಾ ದೇಹವೇ ಬಳಕೆ ಮಾಡಿಕೊಳ್ಳಲು ಸಕಲ ದೇಹಗಳಿಗೆ ನೆರವಾಗಲೆಂದು ಆಯಾ ಸಿದ್ಧಾಂತಗಳನ್ನು ಮಹಾಜ್ಞಾನಿಗಳು ರಚಿಸಿರುವರು . ಆದರೆ ಜನ ಆಯಾ ಗ್ರಂಥಗಳನ್ನು ಬರೆದ ಜ್ಞಾನಿಗಳನ್ನು ಅವರು ಬರೆದ ಸೂತ್ರಪ್ರಧಾನವಾದ ಜ್ಞಾನ ಗ್ರಂಥಗಳನ್ನು ಮಾತ್ರ ವಿಶ್ವಾಸಕ್ಕೆ ತೆಗೆದುಕೊಂಡರು . ತಮ್ಮ ತಮ್ಮ ದೇಹಗಳಲ್ಲಿ ತನ್ಮಯವಾದ ಅರಿವಿನ ಶಕ್ತಿಯನ್ನೆ ಮರೆತರು . ಒಬ್ಬೊಬ್ಬ ಜ್ಞಾನಿಯ ಹೆಸರಲ್ಲಿ ಮತ ಧರ್ಮ ನಿರ್ಮಾಣವಾಯಿತು . ಜಾತಿಉಪಜಾತಿ ಪಂಗಡಗಳು ಹುಟ್ಟಿಕೊಂಡವು. ಜ್ಞಾನಿಗಳು ಬರೆದ ಸೂತ್ರ ಪ್ರಧಾನ ಸಿದ್ಧಾಂತಗಳೆಲ್ಲಾ ಧರ್ಮಗ್ರಂಥಗಳಾದವು . ಅವು ಪೂಜೆಗೆ , ವಾದ ವಿವಾದಗಳಿಗೆ ಉಪನ್ಯಾಸಕ್ಕೆ ಮೀಸಲಾದವು .

ದೇಹದ ಉನ್ನತಿಗಾಗಿ ದೇಹದಿಂದಲೇ ಬರೆದ ಗ್ರಂಥಗಳು ದೇಹಗಳಿಗೆ ಮುಳುವಾದವು. ಈ ಸಕಲ ಸಿದ್ಧಾಂತಗಳಿಂದ ಆದ ಬದಲಾವಣೆಯನ್ನು ಶ್ರೀ ವಿದ್ಯಾನಂದ ಶರಣರು ಗಮನದಲ್ಲಿಟ್ಟುಕೊಂಡು **ನಿಜಸುಖಿ** ಗ್ರಂಥವನ್ನು ಬರೆದರು . ನಿಜಸುಖಿಯಲ್ಲಿ ಬಸವಣ್ಣ ಚೆನ್ನಬಸವಣ್ಣ ಹಾಗೂ ಅಲ್ಲಮಪ್ರಭು ರಂಥವರ 51 ವಚನಗಳಿಗೆ ಶ್ರೀ ವಿದ್ಯಾನಂದ ಶರಣರು ವಚನಾನುಭಾವವನ್ನು ಬರೆದಿದ್ದಾರೆ.

**ಅಂಗ ಸಂಗಿಗನಲ್ಲ ನಮ್ಮ ಬಸವಯ್ಯನು.**
**ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು.**
**ಉಭಯದ ಹಂಗ ಹರಿದು ಉಪಮಾತೀತನಾದ ನಮ್ಮ ಬಸವಯ್ಯನು.**
**ಸಂಗಯ್ಯನಲ್ಲಿ ಕೂಡಿ ನಿರಾಳ ಪ್ರಸನ್ನ ಮೂರ್ತಿಯಾದ ನಮ್ಮ ಬಸವಯ್ಯನು.**
ವಚನದಿಂದ ಹಿಡಿದು
**ಧ್ವನಿಯ ತೋರಲು,**
**ಆ ಧ್ವನಿಯ ಮರೆಯಲ್ಲಿ ಹುಟ್ಟದಮದ್ದುಗ್ಗರು,**
**ಬಸವಣ್ಣಂಗೆ ಶಿವಸುಖವಾಯಿತ್ತು ಬಸವಾ.**
**ಆ ಧ್ವನಿಯಡಗಿ ಅಪ್ರತಿಮ ಸಂಗ**
**ನಿರ್ಮಲಾಕಾರವಾಯಿತ್ತಯ್ಯ ಎನಗೆ,**
**ಪ್ರಣವ ಸ್ವರೂಪ ಬಸವನ ಕಂಡ ಬಳಿಕ**
**ಆನು ಬಸವನ ಶಿಶುವಾದೆನಯ್ಯ ಸಂಗಯ್ಯ**

ವರೆಗೆ ಹೀಗೆ ಒಟ್ಟು 51 ವಚನಗಳನ್ನು ಆಧಾರವಾಗಿಟ್ಟುಕೊಂಡು ಅವುಗಳ ಮೂಲಕ ಅನುಭಾವ ಶಕ್ತಿಯನ್ನು ಓದುವ ತನುವಿಗೆ ಮನದಟ್ಟಾಗುವಂತೆ **''ನಿಜಸುಖಿ''** ಗ್ರಂಥ ಸಿದ್ಧಪಡಿಸಿ ಸ್ವಾನುಭಾವದ ಕೃಷಿಯಲ್ಲಿ ತೊಡಗಿದ ಓದುಗನಿಗೆ ದಾಸೋಹ ರೂಪದಲ್ಲಿ ಉಣ ಬಡಿಸಿದ್ದಾರೆ.

ಸತ್ಯವನ್ನು ಲೋಕೋಪಯೋಗಿ ದೃಷ್ಟಿಯಿಂದ ಹೇಳುವವರೇ ಆಪ್ತರು.

ಲೋಕೋದ್ಧಾರವೆಂದರೇನು? ಅದು ಯಾವುದರಿಂದ ಆಗುತ್ತದೆ? ಎಂಬುದನ್ನು ಸ್ಪಷ್ಟವಾಗಿ ತಿಳಿದು ಸ್ವಾರ್ಥದ ಲವಲೇಶವೂ ಇಲ್ಲದೆ ಉಸಿರಾಟದಷ್ಟೇ ಸಹಜವಾಗಿ ಆ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು ಡಬ್ಬೇರುಮಡುವಿನ ಪರಮಪೂಜ್ಯ ಶ್ರೀ ವಿದ್ಯಾನಂದ ಶರಣರು.

ಶರಣರ ಮಾತೆಲ್ಲಾ ಅಮೃತವಾಯಿತು. ಪೂಜ್ಯರ ವ್ಯಕ್ತಿತ್ವವನ್ನು ವರ್ಣಿಸುವುದು ಕಷ್ಟವೇ. ಅವರನ್ನು ಕಣ್ಣಾರೆ ಕಂಡ, ಅವರೊಡನಾಡಿದ ಶಿಷ್ಯವರ್ಗ, ಅವರ ಪ್ರವಚನಗಳನ್ನು ಕೇಳಿದವರಿಗೆ ಅವರ ಬಗ್ಗೆ ಹೇಳಬೇಕಾಗಿಲ್ಲ . ಯಾರು ಅವರನ್ನು ನೋಡಿಲ್ಲವೋ, ಕೇಳಿಲ್ಲವೋ ಅಂಥವರನ್ನು ಇಂಥ ಒಬ್ಬ ಶರಣರಿದ್ದರು ಎಂದು ನಂಬಿಸುವುದು ಕಷ್ಟದ ಕೆಲಸ ಅಂತಹ ವ್ಯಕ್ತಿತ್ವ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದಶರಣರದು.

ಮಗುವಿನಂಥ ನಿಷ್ಕಲ್ಮಷ ಹೃದಯ , ನಿರ್ಮಲ ನಗೆ, ವಾತ್ಸಲ್ಯಪೂರ್ಣ ನೋಟ. ಸದಾ ಶರಣರ ಗುರುಗಳಾದ ಸದ್ಗುರು ನಾಗಭೂಷಣರ ಸ್ಮರಣೆ, ಒಂದೇ ಮಾತಿನಲ್ಲಿ ಹೇಳುವುದಾದರೆ ಕಣ್ಣಿಗೆ ಬಿದ್ದ ಅರುಹೃದಯಿಗೆ ಸ್ವರೂಪ ಜ್ಞಾನ ಮಾಡಿಸುವ ಛಲವಂತ ಶರಣರವರು.

ಅವರೇ ಹೇಳಿದಂತೆ 4ನೇ ತರಗತಿಯವರೆಗೆ ಅಯ್ಯನವರ ಶಾಲೆಯಲ್ಲಿ ಅಭ್ಯಾಸ. ತಮ್ಮ 23ನೇಯ ವಯಸ್ಸಿನವರೆಗೆ ಈ ಲೋಕದವರು ಆಚರಿಸುವ ಹಲವಾರು ಆಚಾರಗಳಲ್ಲಿದ್ದೆವೆಂದು ಆಗಾಗ ಹೇಳಿಕೊಳ್ಳುತ್ತಿದ್ದರು.

ಬೀದರ್ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮುಚಳಾಂಬದ **ಸದ್ಗುರು ಶ್ರೀ ನಾಗಭೂಷಣ ಶಿವಯೋಗಿಗಳ** ದರ್ಶನದ ನಂತರ ಅವರೆಂದೂ ಹಿಂತಿರುಗಿ ನೋಡಲಿಲ್ಲ. ಪೂರ್ವಾಶ್ರಯದ ಡಬ್ಬೇರುಮಡುವಿನ ಆದನಗೌಡರು **ಶ್ರೀ ವಿದ್ಯಾನಂದ ಶರಣ**ರಾದರು. ಅಯ್ಯನವರ ಶಾಲೆಯಲ್ಲಿ ಕೇವಲ ಕನ್ನಡ ಅಭ್ಯಾಸ ಮಾಡಿದ್ದ ಆದನಗೌಡರು ಸದ್ಗುರು ನಾಗಭೂಷಣರ ಗರಡಿಯಲ್ಲಿ ಸಂಸ್ಕೃತ ಹಾಗೂ ಹಿಂದಿ ಅಭ್ಯಾಸ ಮಾಡಿ ಭಗವದ್ಗೀತೆಯನ್ನು ಸರಳ ಹಾಗೂ ಸುಲಲಿತವಾಗಿ ಪ್ರವಚನ ಮಾಡ ಹತ್ತಿದರು. ಸಕಲ ಶಿವಶರಣರ ವಚನಗಳು ಅವರಿಗೆ ಅತ್ಯಂತ ಪ್ರಿಯವಾದವು. ಕಬ್ಬಿಣದ ಕಡಲೆಯಂತಿರುವ ಅಲ್ಲಮ ಪ್ರಭುಗಳ ವಚನಗಳನ್ನು ನೋಡಿ ಅತ್ಯಂತ ಆನಂದಿತರಾದರು. ಅವುಗಳ ಒಳಗುಟ್ಟನ್ನು ತಮ್ಮ ಪ್ರವಚನಗಳ ಮೂಲಕ ಹೇಳಿ ಶಿಷ್ಯರ ಸ್ವರೂಪ ಜ್ಞಾನಕ್ಕೆ ದಾರಿಮಾಡಿಕೊಟ್ಟರು. ಹಗಲು ದಣಿವರಿಯದೆ ಪ್ರವಚನ ಮಾಡಿದರೆ ರಾತ್ರಿ ಏಕಾಂತದಲ್ಲಿ ವಚನಗಳಿಗೆ ವ್ಯಾಖ್ಯಾನ ಬರೆಯುತ್ತಿದ್ದರು. ಪುಸ್ತಕ ಓದಿ ಉದಾಹರಿಸುವ ಪಂಡಿತೋತ್ತಮನಿಗೆ ತನ್ನ (ದೇಹದ) ಪುಸ್ತಕದ ಪರಿಚಯ ಸ್ವರೂಪ ಜ್ಞಾನ ಕರುಣಿಸುತ್ತಿದ್ದರು.

ಸಕಲ ಶರಣರ ವಚನಗಳೂ ಅವರ ನಾಲಿಗೆಯ ತುದಿಯಲ್ಲಿದ್ದವು. ಪ್ರವಚನಗಳನ್ನು ಸಿದ್ಧಮಾಡಿಕೊಳ್ಳುತ್ತಿರಲಿಲ್ಲ. ಒಮ್ಮೆ ಹೇಳಿದ ವಚನದ ತಿರುಳು ಮತ್ತೊಮ್ಮೆ ಅನೇಕ ಕವಲುಗಳನ್ನು ಒಡೆದು ಒಂದೇ ಅರ್ಥದಲ್ಲಿ ಲೀನವಾಗಿ ಮೈಮನಗಳನ್ನು ಅರಳಿಸಿ ತನ್ನನ್ನು ನೋಡಿಕೊಳ್ಳುವಂತೆ ಮಾಡುವ ಮೋಡಿ ಸದ್ಗುರುಗಳಿಗೆ ಕರಗತವಾಗಿತ್ತು. ಅವರ ಪ್ರವಚನ ಕಲಿತ ವಿದ್ಯೆಯ ಪ್ರದರ್ಶನವಾಗಿರದೆ ಸತ್ಯವೇ ತಾನಾಗಿ ತಾನೇ ಸತ್ಯವಾಗಿ ತಾಯಿ ರೂಪದಲ್ಲಿ ತುತ್ತು ಮಾಡಿ ಉಣಬಡಿಸಿದಂತಿರುತ್ತಿತ್ತು. ತಾವೂ ಉಂಡು ಶಿಷ್ಯರಿಗೂ ಉಣ್ಣಿಸಿ ಸತ್ಯದ ಡೇಗು ಡೇಗುತ್ತಿದ್ದರು.

ಒಬ್ಬ ವ್ಯಕ್ತಿ ಸ್ವರೂಪ ಜ್ಞಾನಿಯಾಗಿ ತಾನು ಯಾವ ಕಾಯಕವನ್ನಾದರೂ ಮಾಡಲಿ ಅವನಿಂದ

ಲೋಕಕ್ಕೆ ಉಪಯೋಗವಾಗುತ್ತದೆ. ಮಹದಾನಂದ ಹೊಂದಿ ಸ್ವಸುಖ ಪಡೆಯುತ್ತಾನೆ ಎಂಬ ಕಳಕಳಿ ಅವರದಾಗಿತ್ತು. ಹಗಲಿರುಳೆನ್ನದೆ ತಮ್ಮ ಅರವತ್ತು ವಸಂತಗಳನ್ನು ಇದಕ್ಕಾಗಿ ಮೀಸಲಿಟ್ಟರು.

ಕುಳಿತಲ್ಲಿ, ನಿಂದಲ್ಲಿ, ಮಲಗಿದಲ್ಲಿ ಅವರ ಧ್ಯಾನ ಶರಣರ ಕುರಿತೇ ಆಗಿರುತ್ತಿತ್ತು. ಅರುಹೃದಯ ಸಿಕ್ಕ ಕೂಡಲೇ ಅವನನ್ನು ಬಿಗಿದಪ್ಪಿ ತಮ್ಮವನನ್ನಾಗಿ ತಮ್ಮ ಮಗನನ್ನಾಗಿ ಮಾಡಿಕೊಂಡು ಆತನೊಳಗಿದ್ದ ಅರುವನ್ನು ಆತನಿಗೇ ಪರಿಚಯಿಸುತ್ತಾ ಆತನ ಮರುವನ್ನು ಆತನಿಂದಲೇ ನಷ್ಟಮಾಡಿಸಿ ಸ್ವರೂಪ ಜ್ಞಾನಿಯನ್ನಾಗಿಸುವ ಸುಳುಹು ನೀಡುತ್ತಿದ್ದರು.

ಹೀಗೆ ಮಾಡುವಾಗ ಅವರ ಜಾತಿ-ಮತ ಪಂಥ ಅರ್ಥವ್ಯವಸ್ಥೆ, ಅಧಿಕಾರ, ಇದಾವುದನ್ನು ಗಮನಿಸದೆ ಅರುಹೃದಯವನ್ನು ಮಾತ್ರ ನೋಡುತ್ತಿದ್ದರು. ಅವನ ಭೇಟಿಗಾಗಿ ಹಗಲಿರುಳು ಹಂಬಲಿಸುತ್ತಿದ್ದರು. ದೇಹದ ಅಭಿಮಾನ ಅಹಂಕಾರ ಬಿಡುವವರಿಗೆ ಸುಲಲಿತವಾಗಿ ಪರೀಕ್ಷೆಗಳು ಸದಾ ನಡೆಯುತ್ತಿದ್ದವು. ಒಬ್ಬ ವ್ಯಕ್ತಿ ಸ್ವರೂಪ ಜ್ಞಾನಿಯಾಗಿ ತಾನು ಯಾವ ಕಾಯಕವನ್ನಾದರೂ

ಪಾದದಿಂದ ಹಿಡಿದು ನೆತ್ತಿಯವರೆಗಿನ ಅಭಿಮಾನ ಬಿಟ್ಟಾಗಲೇ ಆತ ಸದ್ಗುರುಗಳಿಂದ ಪೂಜಿತನಾಗುತ್ತಿದ್ದ ಪೂಜಿಸಲ್ಪಡುತ್ತಿದ್ದ. ಗುರುವಾಗುತ್ತಿದ್ದ. ಗುರುಮುಟ್ಟಿ ಗುರುವಾಗುವ ಪರಂಪರೆ ಶರಣ ಪರಂಪರೆಯಲ್ಲಿ ಮಾತ್ರ ಕೇಳುತ್ತೇವೆ. ಆದರೆ ಸದ್ಗುರು ವಿದ್ಯಾನಂದ ಶರಣರು ಆರು ದಶಕಗಳವರೆಗೆ ಇದನ್ನು ಸದ್ದುಗದ್ದಲವಿಲ್ಲದೆ ಏಕಾಂಗಿಯಾಗಿ ನಡೆಸಿಕೊಂಡು ಬಂದರು. ಜ್ಞಾನ ಪಡೆದು ತಮ್ಮ ಕಾಯಕ ಮಾಡುತ್ತಾ ಸ್ವಸುಖದಲ್ಲಿ ಲೀನವಾದ ಸದ್ಗುರು ವಿದ್ಯಾನಂದ ಶರಣರ ಶಿಷ್ಯಂದಿರು ಸಾವಿರಾರು ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ಸದ್ಗುರು ವಿದ್ಯಾನಂದರ ಕಾಯಕದಲ್ಲಿ ಲೀನವಾದರೆ ಕಲ್ಯಾಣ ರಾಜ್ಯ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ.

ಮಹಾತ್ಮಾ ಬಸವಣ್ಣ ಇಷ್ಟ ಲಿಂಗ ಕೊಟ್ಟು ಉಪಕಾರ ಮಾಡಿದನೆಂದು ಒಂದು ವರ್ಗ ಅವರನ್ನು ಸ್ಮರಿಸುತ್ತದೆ. ಮತ್ತೊಂದು ವರ್ಗ ರೇಣುಕರು ಇಷ್ಟಲಿಂಗ ಕೊಟ್ಟರೆಂದು ಪ್ರತಿಪಾದಿಸುತ್ತದೆ. ಹೀಗೆ ಅನ್ನುವ ಈ ಎರಡು ವರ್ಗಗಳು ಉಣ್ಣೆಯಂತೆ ಕ್ಷೀರದ ರುಚಿಯನ್ನು ಸವಿಯಲಿಲ್ಲವೆಂದು ರೇಣುಕ ಹಾಗೂ ಶರಣರ ಅಮೃತವನ್ನು ಸವಿದ ಅನುಭಾವಿಗಳಿಗೆ ಅನ್ನಿಸದೇ ಇರದು. ಶರಣರ ವಚನಗಳಲ್ಲಿ ರೇಣುಕರ ಅನುಭಾವದಲ್ಲಿ ಕುರುಹನ್ನೆ ಕಂಡರು. ಸದಾ ಕತ್ತಲನ್ನೆ ಕಂಡವರಿಗೆ ಬೆಳಕಿನ ರುಚಿ ಹಿಡಿಸುವುದಿಲ್ಲ.

ಸದ್ಗುರು ವಿದ್ಯಾನಂದರು ಈ ನಾಡು ಕಂಡ ಮಹಾನ್ ಸಂತರು. ಮಠ ಮಾನ್ಯಗಳ ಒಡೆಯರು ಸಾಹಿತಿಗಳು ಈ ಸತ್ಪುರುಷರನ್ನು ನೋಡಲು ಬರಲಿಲ್ಲ . ರಾಜಕಾರಣಿಗಳು ಇವರತ್ತ ಸುಳಿಯಲಿಲ್ಲ. ಗುರುಗಳಾದರೂ ಅಷ್ಟೆ. ಅವರ ನೆರಳಿನ ಸಾಮಿಪ್ಯವೂ ಹೋಗಲಿಲ್ಲ. ಅರುಹೃದಯಿಗಳನ್ನು ಕಂಡು ಅರಿವಿನ ಬೀಜ ಬಿತ್ತಿದರು. ಮೊಳಕೆಯೊಡೆದು ಸಸಿಗಳಾಗಿವೆ. ಕೆಲವು ಮರಗಳಾಗಿ ಫಲಕ್ಕೆ ಬಂದಿವೆ . ಆ ಮಾಗಿದ ಅರಿವಿನ ಫಲ ತನ್ನ ಕೆಲಸ ಮಾಡದೇ ಇರದು.

ತನ್ನೊಳಗಿರುವ ಒಡೆಯನನ್ನು ತೋರಿಸಿ ಅವನೇ ತಾನಾಗುವ ಪ್ರಯತ್ನವನ್ನು ಶರಣರು ಹನ್ನೆರಡನೆಯ ಶತಮಾನದಲ್ಲಿ ಯಶಸ್ವಿಯಾಗಿ ಪೂರೈಸಿದ್ದಾರೆ.

ಅದೇ ಪ್ರಯತ್ನವನ್ನು ಪರಮ ಪೂಜ್ಯ ಸದ್ಗುರು ಡಬ್ಬೇರುಮಡುವಿನ ಶ್ರೀ ವಿದ್ಯಾನಂದ

ಶರಣರು ಮನೆ ಮನೆಗೆ ತೆರಳಿ ಶ್ರೀಸಾಮಾನ್ಯನನ್ನು ಸ್ವರೂಪ ಜ್ಞಾನಿಗಳನ್ನಾಗಿ ಪರಿವರ್ತಿಸಲು ಏಕಾಂಗಿಯಾಗಿ ಯತ್ನಿಸಿದರು. ಹೆದ್ದೊರೆನಾಡು ಕಂಡ ಅಪೂರ್ವ ಸಂಚಾರಿ ಸಂತರಾದ ಪೂಜ್ಯ ಶ್ರೀ ವಿದ್ಯಾನಂದ ಶರಣರು ನಾಡಿನಾದ್ಯಂತ ಆಧ್ಯಾತ್ಮದ ಚಿಂತನೆಯ ವಾತಾವರಣವನ್ನು ಮೂಡಿಸಿದರು.

ಉತ್ತರ ಕರ್ನಾಟಕದ ರಾಯಚೂರು, ಕಲಬುರ್ಗಿ, ಬೀದರ್, ಬಾಗಲಕೋಟೆ, ಬಿಜಾಪುರ, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳಾದ್ಯಂತ ಸತತ ಅರವತ್ತು ವರ್ಷಗಳವರೆಗೆ ಹಗಲಿರುಳೆನ್ನದೆ ಸಂಚರಿಸಿ ಸಾವಿರಾರು ಸಂಖ್ಯೆಯ ಜಿಜ್ಞಾಸುಗಳಲ್ಲಿ ಆಧ್ಯಾತ್ಮದ ಆಸಕ್ತಿ ಹುಟ್ಟಿಸಿದರು.

ಈ ಜ್ಞಾನ ಮಹಾಯಜ್ಞ ಅವರೊಂದಿಗೆ ನಂದಲಿಲ್ಲ. ಅನುಭವ ಮಂಟಪದಲ್ಲಿ ಚೆನ್ನಬಸವಣ್ಣನವರು ಕ್ರಿಯಾಶೀಲರಾದಂತೆ ಬೆನಕನ ಹಳ್ಳಿಯ ಸದ್ಗುರು ನಾಗಭೂಷಣ ಶಿವಯೋಗಿ ಮಹಾಬೋಧಾಲಯದಲ್ಲಿ ಪೂಜ್ಯ ವಿದ್ಯಾನಂದ ಶರಣರ ಪ್ರೀತಿಯ ಕಂದ ಮಹಾಜ್ಞಾನಿ ದೇವಾನಂದರಾಗಿ ರೂಪುಗೊಂಡಿರುವರು.

ಸಾಧನೆಯ ಮಾರ್ಗದಲ್ಲಿರುವವರಿಗೆ ಯಾದಗಿರಿ ಜಿಲ್ಲೆಯ ಹುಣಸಿಗಿ ತಾಲೂಕಿನ ಬೆನಕನ ಹಳ್ಳಿಯ ಮಹಾ ಬೋಧಾಲಯ ಕೈ ಮಾಡಿ ಕರೆಯುತ್ತಲಿದೆ.

ಸದ್ಗುರು ಶ್ರೀ ವಿದ್ಯಾನಂದಶರಣರು ಜೂನ್ 1-2006 ರಂದು ಅಸ್ವಸ್ಥರಾದರು. ದೇಹದ ಬಳಲಿಕೆಯ ಮಧ್ಯೆಯೇ ಪ್ರವಚನ ಸಾಗಿತ್ತು. ಆನಂದದ ಮರೆಯಲ್ಲಿ ದೇಹ ಮತ್ತು ಪ್ರಾಣದ ಚಿನ್ನಾಟ ನಡೆದೇ ಇತ್ತು. 23 ದಿನಗಳ ಚಿಕಿತ್ಸಾ ಹಂತದಲ್ಲಿ ವೈದ್ಯರಿಗೆ ಒಮ್ಮೆಯೂ ದೇಹಕ್ಕಾದ ನೋವಿನ ಸಂಗತಿಯನ್ನು ವ್ಯಕ್ತಪಡಿಸಲಿಲ್ಲ.

ಗುರುಗಳು ಮುಂದಿನ ಚಿಕಿತ್ಸೆಗೆ ಒಪ್ಪಿಗೆ ಕೊಡಲಿಲ್ಲ. ಈ ಶರೀರದ ಕತೆ ಮುಗಿಯಿತು. ಬೆಳಿಗ್ಗೆ ಊರಿಗೆ ಹೊರಡೋಣ ಎಂದರು. ಅವರ ದೇಹದ ನರಳಾಟದಿಂದ ನನ್ನ ಹಾಗೂ ದೇವಾನಂದ ಶರಣರ ಮುಖ ಕಂದಿತು. ಇದನ್ನು ಗಮನಿಸಿದ ಗುರುಗಳು ನಮ್ಮಿಬ್ಬರನ್ನು ಹತ್ತಿರ ಕೂಡಿಸಿಕೊಂಡು ಇಡೀ ರಾತ್ರಿ ಪ್ರವಚನ ಮಾಡಿದರು, ಮಹಾಜ್ಞಾನ ಕಾಯ ಮತ್ತು ಪ್ರಾಣದ ಚಿನ್ನಾಟದ ದರ್ಶನ ಮಾಡಿಸಿದರು.

ಬೆನಕನಹಳ್ಳಿಯಲ್ಲಿ ದೇಹ ಬಿಡುವುದಾಗಿ ಹೇಳಿ ಕರೆದುಕೊಂಡು ಹೋಗಲು ಸೂಚಿಸಿದರು. ದಿನಾಂಕ 23-6-2006 ರಂದು ಬೆನಕನ ಹಳ್ಳಿಗೆ ಹೋದೆವು. ಕೊನೆಗೆ ಮೂರು ದಿನಗಳಲ್ಲಿ ಸಂಜ್ಞೆಯ ಮೂಲಕ ಹೇಳಿ ದಿನಾಂಕ 2-7-2006 ಮಧ್ಯಾಹ್ನ 2.20 ಗಂಟೆಗೆ ದೇಹಬಿಟ್ಟರು.

ಅವರು ಬರೆದ ಶರಣ ಸಾಹಿತ್ಯದಲ್ಲಿ 'ನಾನು ನನ್ನ ಕಂಡ ಕಣ್ಣು', 'ನಿಃಶಬ್ದ ಕೃಪೆ' ಅವರಿರುವಾಗಲೇ ಪ್ರಕಟವಾಗಿದೆ. ಅವರು ಇರುವವರೆಗೂ ತಮ್ಮ ಸಾಹಿತ್ಯ ಪ್ರಕಟಿಸಲು ಮುಂದೆ ಬಂದವರಿಗೆ ಇದನ್ನು ತಮ್ಮ ಹೃದಯದಲ್ಲಿ ಪ್ರಕಟಿಸಿಕೊಳ್ಳಿ ಪ್ರಕಟಣೆ ಬೇಡ ಎಂದು ಒತ್ತಿ ಹೇಳುತ್ತಿದ್ದರು. ನನ್ನ ಒತ್ತಾಯದ ಮೇರೆಗೆ ಪ್ರಕಟಿಸಲು ಅನುಮತಿ ಕೊಟ್ಟರು. 'ಗಗನ ಸಿದ್ಧಾಂತ ' ' ಗುರುಕನ್ಯ, ' ಡಿ.ಟಿ.ಪಿ.ಮಾಡಿ ತೋರಿಸಿದಾಗ ಅತ್ಯಂತ ಆನಂದ ಪಟ್ಟರು. ಇಷ್ಟು ಸಾಕು. ಬೇಕಾದವರು ಇದರ ಫೋಟೊ ಪ್ರತಿ ಮಾಡಿಕೊಳ್ಳಲಿ ಎಂದು ಹೇಳಿದರು.

ಗಗನ ಸಿದ್ಧಾಂತ 136 ವಚನಗಳ ತಾತ್ಪರ್ಯ ಮೊದಲ ಭಾಗ 6-7-2006 ರಂದು

ಮುದ್ರಣಗೊಂಡು ಪ್ರಕಾಶಿಸಲ್ಪಟ್ಟಿತು. ಪ್ರತಿಗಳು ಮುಗಿದು ಹೋದ ನಿಮಿತ್ತ ಪುನಃ ಸಮಗ್ರವಾಗಿ ಗಗನ ಸಿದ್ಧಾಂತವನ್ನು ಪ್ರಕಟಿಸಲಾಯಿತು . ಈ ಗ್ರಂಥ ಭೂಮಿಯೊಳಗಿದ್ದ ನಿಧಿಯಂತೆ ಅಂಜನ ಹಾಕಿ ಹುಡುಕಬೇಕು. ಸಾಧಕರಿಗೆ ಮಾರ್ಗ ಸುಲಭವಾಗಲಿ ಎಂದು ಹೆಚ್ಚಿನ ವಿವರಣೆಯೊಂದಿಗೆ ಶ್ರೀಸಾಮಾನ್ಯರ ಮನ ಮುಟ್ಟುವಂತೆ ಸದ್ಗುರುಗಳು ವಿವರಿಸಿದ್ದಾರೆ.

ಪೂಜ್ಯ ವಿದ್ಯಾನಂದ ಶರಣರ ಅಪ್ರಕಟಿತ ಸಾಹಿತ್ಯ ಐದು ಸಾವಿರ ಪುಟಗಳನ್ನು ಮೀರಲಿದೆ. ಪತ್ರಿಕೆ ಪ್ರಸಾರದೊಂದಿಗೆ ಅರಿವಿನ ಪ್ರಸಾರ ಮಾಡಲು ಪಣ ತೊಟ್ಟಿರುವ ರಾಯಚೂರು (ಸ್ಪಿಲ್)ಸುದ್ದಿಮೂಲ ಪಬ್ಲಿಷರ್ಸ್ ಇಂಡಿಯಾ ಲಿಮಿಟೆಡ್ ಸಂಸ್ಥೆಯು ಸದ್ಗುರುಗಳ ಇಚ್ಛೆಯಂತೆ ಶ್ರೀ ಬಸವ ಸೇವಾ ಪ್ರತಿಷ್ಠಾನ ಪ್ರಕಾಶನದ ಮೂಲಕ ಸಕಲರೂ ಸ್ವರೂಪ ಜ್ಞಾನಿಗಳಾಗಬೇಕೆನ್ನುವ ಆಶಯದೊಂದಿಗೆ ' **ನಿಜಸುಖಿ** ' ಗ್ರಂಥ ಪ್ರಕಾಶಿಸಿದೆ .

ಪ್ರಯತ್ನ ನಮ್ಮದು, ಅಂತಿಮ ಇಚ್ಛೆ ಓದುಗರದು ; ಸಕಲ ತನುಗಳಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನದು .

**ಬಸವರಾಜ ಸ್ವಾಮಿ**
ಸಂಪಾದಕ, ರಾಯಚೂರು
ಮೇ 25, 2023

# ಅಂಗ ಸಂಗಿಗನಲ್ಲ ಬಸವಯ್ಯ

**ಅಂಗ ಸಂಗಿಗನಲ್ಲ ನಮ್ಮ ಬಸವಯ್ಯನು.**
**ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು.**
**ಉಭಯದ ಹಂಗ ಹರಿದು ಉಪಮಾತೀತನಾದ ನಮ್ಮ ಬಸವಯ್ಯನು.**
**ಸಂಗಯ್ಯನಲ್ಲಿ ಕೂಡಿ ನಿರಾಳ ಪ್ರಸನ್ನ ಮೂರ್ತಿಯಾದ ನಮ್ಮ ಬಸವಯ್ಯನು.**

**ತಾತ್ಪರ್ಯ :** ಬಸವರಸರನ್ನು ನಮ್ಮ ಬಸವಯ್ಯನೆಂದು ವರ್ಣಿಸುವ ಶಕ್ತಿ ಇವರಾರು ? ಈ ಶಕ್ತಿ ಬಸವಯ್ಯನ ಇಂಗಿತವನರಿತ ಘನ ಶಕ್ತಿ. ಇದು ಒಂದಾದ ಶಕ್ತಿ ಎನ್ನಲೆ ? ಎರಡಾಗಿ ಕಾಣಬರುತ್ತಿದೆ . ಎರಡೆಂಬೆನೆ ? ಒಂದಾಗಿ ಕಾಣಬರುತ್ತಿದೆ. ಒಂದಾಗಿದೆ ಎಂಬೆನೆ ? ವರ್ಣಾತೀತವಾಗಿದೆ. ತೆರಹಿಲ್ಲದ ಘನದಲ್ಲಿ ಲೀಯವಾದ ಮಹದಿರುವ ಸೂಚಿಸುತ್ತಿದೆ.

ಇಂತಪ್ಪ ಮಹದಿರುವು ಸಂಗಯ್ಯನಲ್ಲಿ ಸಮರಸವಾಗಿಹ ನಿರುಪಮ ನಿಜೈಕ್ಯದಲ್ಲಿ ಪ್ರಸನ್ನ ಮೂರ್ತಿಯಾಗಿಹ ಪರಿಣಾಮ ಸೂಚಿಸುವುದು ಕಂಡು, ಇದು ಬಸವಯ್ಯನ ಸಂಗದ ಸುಸಂಗಿಯಾಗಿಹ ಸ್ವಶಕ್ತಿ. ಸ್ವಪ್ರಭೆಯ ಪ್ರಕಾಶಿಸುವ ಸ್ವಮಹಿಮೆಯೆ ಇದಾಗಿದೆಯಲ್ಲ! ಓಹೊ ! ಮಹವು, ಮಹದಾನಂದದಲಕ್ಕಾಡಿ, ಮತ್ತಲ್ಲಿಯೆ ಲೀಯವಾಗಿರ್ದ ಸ್ವಯಂಭು.

"ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಒಂದೆರೆಡೆಂಬ ಸಂದೇಹವಿದೇನೊ ? ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇರಾಗದುಪದೇಶ. ಗುರು ಶಿಷ್ಯರೆಂಬ ಭಾವಕ್ಕೆ ಭಿನ್ನ ಉಂಟೆ ಗುಹೇಶ್ವರಾ" ಎಂದಂತೆ ಶಿವ ಶಕ್ತಿ ಒಂದೆಂಬೆನೆ ? ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಅಭೇದ್ಯ ಶಿವನಲ್ಲಿ ಭೇದಿಸಲು ಬಂದ ಶಕ್ತಿ ಎರಡೆಂಬೆನೆ ? ಇದು ಅಭೇದ್ಯ ಶಿವ. ಇದು ಅಗಲಲಿಲ್ಲದ ಕೂಟ, ಅಗಲಲಿಲ್ಲದ ಕೂಟವೆಂಬೆನೆ? ಭೇದಿಸಿದಂತೆ ಕಂಡರೂ ಅಭೇದ್ಯ ಶಿವತ್ವವೇ ನಿಜವೆಂದು ತೋರಿಸಲು ಬಂದ ಈ ಘನ ಶಕ್ತಿ.

ಬಸವಯ್ಯನ ನಿಜದಂಗವ ಕಂಡ ಪರಿಣಾಮ ಇದಲ್ಲದೆ ಬಸವಯ್ಯನ ಹರ್ಷವ ಕಂಡರಿದು, ಐಕ್ಯ ಸಂಪನ್ನೆಯಾದ್ದರಿಂದ ಸಂಗಯ್ಯನ ಸುಖದಲ್ಲಿ ನಿಜ ನಿವಾಸಿಯಾಗಿಪ್ಪ ಘನ ಸಂಪನ್ನೆ. ಇಂತಪ್ಪ ಮಹಾ ಸಂಪನ್ನೆಯಾದುದರಿಂದ ಬಸವಯ್ಯನ ಇಂಗಿತವನರಿದು ಉಪಮಾತೀತವಾದ, ನಿರಾಳ ಪ್ರಸನ್ನ ಮೂರ್ತಿಯೆಂದು ಕೊಂಡಾಡಿದ ಮಹಾಶಕ್ತಿಗೆ ನಮೋ ನಮೋ ಎಂದು ಆ ಘನ ಶಕ್ತಿ ಘನಾನುಭವವನ್ನು ತಾತ್ಪರ್ಯ ರೂಪದಲ್ಲಿ ಬರೆಯುವ ಅಲ್ಪ ಸೇವೆಯ ಕಾರ್ಯಾರಂಭ ಮಾಡುವೆ. ಇದರಲ್ಲಿ ಲೋಪದೋಷಗಳಿರುವುದು ಸಹಜ. ಇವುಗಳನ್ನು ತಿದ್ದಿಕೊಂಡು ಓದುವುದು. ಇದಲ್ಲದೆ ದೋಷವನ್ನು ತಿಳಿಸಿದಲ್ಲಿ ಮಹದುಪಕಾರವೆಂದು ಸ್ಮರಿಸುವೆ.

**ಅಂಗಸಂಗಿಗನಲ್ಲ ನಮ್ಮ ಬಸವಯ್ಯನು. ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು :**

ಸುಖದ ಸುಖಿಯಾಗಿಹ ನೀಲಾಂಬಿಕೆ, ಬಸವಯ್ಯನ ಪರಿಚಿತಳಾಗಿರುವುದರಿಂದ ಅಂಗ ಸಂಗಿಗನಲ್ಲ ನಮ್ಮ ಬಸವಯ್ಯನೆಂದು ಬಸವರಸರ ಪರಿಚಯ ಮಾಡಿಕೊಡುತ್ತಿದ್ದಾಳೆ. ಬಸವಯ್ಯ ತನ್ನ ಅಂಗವ ಕಾಣದ ಸರ್ವಾಂಗ ಲಿಂಗಿ. ಅಂಗದ ಮೇಲೆ ತೆರಹಿಲ್ಲದ ಲಿಂಗಭರಿತ

ವೆಂಬ ಸಾಹಿತ್ಯವಿಡಿದು ಅರಿದರಿದು ನೋಡಿದ ಸರ್ವಾಂಗ ಲಿಂಗಿ, ಸರ್ವಾಂಗ ಲಿಂಗಿಗೆ ಅಂಗಾಂಗಳೆ ಲಿಂಗಾಂಗವಾಗಿಹುದು. ಭಾವಕ್ಕಿಂಬಿಲ್ಲ ಶಬ್ಧಮೀಸಲು ನೋಡಾ.

ನುಡಿಗೆಡೆಯಿಲ್ಲ ಎಡೆಗೆ ಕೆಡೆಯಿಲ್ಲ ಗುಹೇಶ್ವರ ಲಿಂಗ ವೇಧಿಸಲೊಡನೆ. ಬಸವರ ಸರು ಲಿಂಗದ ಲಿಂಗವಾಗಿಹ ಸ್ವಯ ಲಿಂಗಿಯಾಗಿಹ ಮಹದರವು. ಅಲ್ಲಿ ಭಾವವೇತರದು , ನಿರ್ಭಾವವೇತರದು? ಶಬ್ಧ ನಷ್ಟ ಮಾಡಿದ ನಿಃಶಬ್ಧ ವೇದಿ, ನುಡಿಗೆಡೆಗೊಡದ ಘನವನರಿತು, ಘನಕ್ಕೆ ಘನವಾಗಿಹ ಶಬ್ದಮುಗ್ಧಾನುಭವಿಯಾದ ಮಹಾಂತಂಗೆ ಅಂಗ ಸಂಗವೆಲ್ಲಿಯದು. ಅಂಗವೆ ಲಿಂಗವಾಗಿ ಕಾಣುವ ಸುಸಂಗಿಗೆ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂಬ ತ್ರಿವಿ ಧಾಂಗ ಎಲ್ಲಿಹವು? ಇದು ಕಾರಣ ಅಂಗ ಸಂಗಿಗನಲ್ಲ ನಮ್ಮ ಬಸವಯ್ಯನೆಂದು ಹೇಳಿಹಳು.

ಬಸವರಸರಿಗೆ ನಮ್ಮ ಬಸವಯ್ಯನೆಂದು ಸೂಚಿಸಿದುದು ಬಹು ಗಹನಾರ್ಥ ಸಂಜ್ಞೆ ಯುಳ್ಳದ್ದಾಗಿಹುದು. ಬಸವಯ್ಯನ ಇರವು, ತನ್ನಿರವು ಒಂದಾದುದರಿಂದ ಹೃದಯಕ್ಕೆ ಹೃದಯವೆ ಅಪ್ಪಿಕೊಂಡು ಪರವಶವಾಗಿ ನಮ್ಮ ಬಸವಯ್ಯನೆಂದು ವರ್ಣಿಸಿಹಳು. ಇದಲ್ಲದೆ ನನ್ನ ಬಸವ ಯ್ಯನೆನಲಿಲ್ಲ, ನಮ್ಮ ಬಸವಯ್ಯನೆಂದು ಹೇಳಿಕೊಂಡುದು ನೋಡುವುಡೆ, ನನ್ನೊಬ್ಬಳ ಬಸವ ಯ್ಯನಲ್ಲ, ಸಕಲ ಶರಣ ಶರಣೆಯರ ಸ್ವರೂಪವಾಗಿ ಅವರ ಹೃದಯ ಮಂದಿರದಲ್ಲಿ ನಿರಂತರ ಬೆಳಗುವ ಚಿಜ್ಯೋತಿ ಬಸವಯ್ಯ. ಇದು ಶರಣ ಶರಣೆಯರದಾಗಿಹ ಚಿಜ್ಯೋತಿ. ಸಕಲ ನಿಃಕಲವೆಂಬುದಕ್ಕೆಡೆಗೊಡದ ಬೆಳಗುಳ್ಳ ಮಹಾ ಘನವಾದುದರಿಂದ ನಮ್ಮ ಬಸವಯ್ಯ ನೆಂದು ಹೇಳಿಹಳು.

**ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು :**

ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗಿಗೆ ಪ್ರಾಣದ ಭ್ರಮೆ ಏತರದು ? ಆರು ಪ್ರಾಣವೆ ತಾವಾಗಿಹರು, ಅವರಿಗೆ ಭ್ರಮೆ ಉಂಟು. ಭ್ರಮೆ ಉಳ್ಳವಂಗೆ ಹುಟ್ಟಿದುದುಂಟು, ಬದುಕಿದುದುಂಟು, ಸತ್ತುದುಂಟು, ದಶ ಪ್ರಾಣವಳಿದು, ಲಿಂಗವೆ ತಾನೆಂದರಿದ ಶರಣ, ಪ್ರಾಣಂಗಳ ಧರ್ಮವನ್ನು ತನ್ನ ಮೇಲೆ ಆರೋಪಿಸಿಕೊಳ್ಳಲಾರ.

ಶರಣಂಗೆ ಹೃದಯ ಗ್ರಂಥಿ ನಷ್ಟವಾಗಿ ಹೃದಯದ ಹಂಗಿಗನಲ್ಲ, ಪ್ರಾಣದ ಪ್ರಾಣವೆ ತನ್ನಿರುವು ಆಗಿಹುದು. ಪ್ರಾಣವೆ ಹುಸಿಯಾಗಿ ಪ್ರಾಣದ ಪ್ರಾಣವಾಗಿಹ ತನ್ನಿರುವು ತಾನೆಂಬುದು ದಿಟವಾಗಿಹುದು. ಪ್ರಾಣವದು ಅಲ್ಪ, ಪ್ರಾಣದ ಪ್ರಾಣವದು ಮಹವು. ತಾನೆ ಮಹವು ಆಗಿ, ಮಹದಾನಂದದ ಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದ ಅನಂತವು. ಬಸವರಸ ಅನಂತನಾಗಿ ಹುದರಿಂದ ಪ್ರಾಣವೆಂಬುದು ಪುಸಿಯಾಗಿ ಸ್ವೀಕರಿಸಿದವನಲ್ಲ, ತ್ಯಜಿಸಿದವನಲ್ಲ, ನಷ್ಟ ಮಾಡಿ ದವನಲ್ಲವಾದ್ದರಿಂದ ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನೆಂದು ಹೇಳಿಹಳು.

**ಉಭಯದ ಹಂಗಹರಿದು ಉಪಮಾತೀತನಾದ ನಮ್ಮ ಬಸವಯ್ಯನು :**

ಸಾಕಾರ, ನಿರಾಕಾರವೆಂಬ ಹಂಗ ಹರಿದ, ತೆರಹಿಲ್ಲದ ಘನ, ನಾನು ನೀನು ಎಂಬ ಉಭಯದ ಹಂಗ ಹರಿದ ನಿಸ್ಸೀಮ. ಅಹುದು ಅಲ್ಲವೆಂಬ ಉಭಯದ ಹಂಗ ಹರಿದ ಮಹಾಘನ. ಅರಿವೆ ಅರುಹಿಸಿಕೊಂಬ ಈ ಉಭಯದ ಹಂಗ ಹರಿದ ಅರಿಯಲಿಲ್ಲದ ಅರುವು, ಕ್ಷರ ಅಕ್ಷರವೆಂಬ ಈ ಉಭಯದ ಹಂಗು ಹರಿದ ಅಕ್ಷರಾಕ್ಷರ ಮೀರಿದ ಘನ. ಇಂದ್ರಿಯಂಗಳ ಶುಭಾಶುಭವೆಂಬ ಉಭಯ ಹಂಗ ಹರಿದ ಅತೀಂದ್ರಿ. ಪ್ರಾಣ ಪ್ರಣವವೆಂಬ ಉಭಯದ ಹಂಗ ಹರಿದ ಅಗಣಿತ ಅಕ್ಷರೇಶ್ವರ ತಾನೆಂದರಿದ ಉಪಮಾತೀತನಾದುದರಿಂದ

ನಮ್ಮ ಬಸವಯ್ಯನೆಂದು ಹೇಳಿಹಳು.

**ಸಂಗಯ್ಯನಲ್ಲಿ ಕೂಡಿ ನಿರಾಳ ಪ್ರಸನ್ನ ಮೂರ್ತಿಯಾದ ನಮ್ಮ ಬಸವಯ್ಯನು :**

ತೆರಹಿಲ್ಲದ ಘನವಾಗಿಹ ಸಂಗಯ್ಯನಲ್ಲಿ ಬೆರೆತು, ಮನವು ಪ್ರಶಾಂತ ಮೂರ್ತಿಯಾದುದರಿಂದ ಗಯ್ಯನಲ್ಲಿ ಕೂಡಿ ನಿರಾಳ ಪ್ರಸನ್ನ ಮೂರ್ತಿಯಾದ ನಮ್ಮ ಬಸವಯ್ಯನು ಎಂದು ಹೇಳಿಹಳು.

# ಅಂಗಾಂಗಗಳೆರಡು ದೃಷ್ಟಿ ಒಂದು

**ಅಂಡಜವಳಿದ ಬಸವ, ಪಿಂಡಜವಳಿದ ಬಸವಾ,**
**ಆಕಾರವಳಿದ ಬಸವಾ, ನಿರಾಕಾರವಳಿದ ಬಸವಾ,**
**ಸಂಗವಳಿದ ಬಸವಾ, ನಿಸ್ಸಂಗವಳಿದ ಬಸವಾ,**
**ಸಂಗಯ್ಯನಲ್ಲಿ ಸ್ವಯಲಿಂಗವಾದ ಬಸವಾ.**

**ತಾತ್ಪರ್ಯ : ಅಂಡಜವಳಿವ ಬಸವಾ :**

ಬಸವನ ಕಂಡರಿದ ನೀಲಾಂಬಿಕೆಯ ದೃಷ್ಟಿ ಇದು. ಚಿದ್ರೂಪವರಿತು ಘನಕ್ಕೆ ಘನವಾದ ದೃಷ್ಟಿ, ಈರ್ವರದು ಒಂದಾದ ದೃಷ್ಟಿ, ಕಣ್ಣೆರಡು, ದೃಷ್ಟಿ ಒಂದೆ ! ನೋಡಲು ಅಂಗಾಂಗಗಳೆರಡು ದೃಷ್ಟಿ ಒಂದು. ಬಸವನೆಂದರೆ ನೀಲಾ, ನೀಲಾ ಎಂದರೆ ಬಸವ. ಬಸವ ಕಂಡುದು ನೀಲಾ ಕಂಡಳು, ನೀಲಾ ಕಂಡುದು ಬಸವ ಕಂಡನು.

ಈರ್ವರು ಕಂಡುದು ಲಿಂಗಕ್ಕೆ ಲಿಂಗವಾಗಿಹ ಸ್ವಯ ಲಿಂಗವ ಕಂಡುದು. ಇದು ತನ್ನಲ್ಲಿ ತನ್ನ ಸ್ವಸ್ವರೂಪವಾಗಿ ತಿಳಿದ ಘನದೃಷ್ಟಿ, ತನ್ನನ್ನು ಚಿತ್ಸೂರ್ಯನಾಗಿ ಕಂಡ ದೃಷ್ಟಿ, ಕತ್ತಲೆಗೆ ಬೆಳಕಿನ ಸಂಬಂಧವಾದಂತೆ. ಸಕಲ ಭ್ರಾಂತಿ ರೂಪ ಕತ್ತಲೆ ನಷ್ಟವಾಗಿ ಕಂಡ ದಿವ್ಯ ದೃಷ್ಟಿ, ಕತ್ತಲೆಯು ಸೂರ್ಯನ ಕಾಣ ಹೋಗಿ, ತಾ ನಷ್ಟವಾಗಿ ಎತ್ತನೋಡಿದಡತ್ತ ಪ್ರಕಾಶ ಪ್ರಕಾಶವೆ ! ಆಗ ಕತ್ತಲು ಇದ್ದುದೆಲ್ಲಿ ? ಪೂರ್ವದಲ್ಲಿ ಕತ್ತಲೆ ಇದ್ದುದು ನಿಜ. ಈಗ ಅಲ್ಲಿ ಎಲ್ಲೆಲ್ಲೂ ಬೆಳಕೆ, ಬೆಳಕು. ಹಾಗೆ ಮೊದಲು ಅಂಡಜ, ಪಿಂಡಜ, ಸಾಕಾರ, ನಿರಾಕಾರ, ಸಂಗ, ನಿಸ್ಸಂಗ ಕಂಡಿತ್ತು. ಹೀಗೆ ಕಂಡುದು ಭ್ರಾಂತಿ ದೃಷ್ಟಿ, ಎಲ್ಲಿ ಭ್ರಾಂತಿ ರೂಪ ಕತ್ತಲೆ ಇದೆ, ಅಲ್ಲಿ ಭಾವ ರೂಪವಾಗಿಹ ನಾಮರೂಪವುಂಟು. ಈ ತೋರುವ ನಾಮರೂಪವಳಿಯಲು, ತೆರಹಿಲ್ಲದ
ಲಿ ಂ ಗ
ಭರಿತವೆಂಬ ಗುರು ಕಾರುಣ್ಯವ ಅರಿದರಿದು ನೋಡುವುದು. ಆಗ ಅಂಡಜವೆಂಬ ಭ್ರಮ ರೂಪ ಕತ್ತಲೆ ನಷ್ಟವಾಗಿ ತೆರಹಿಲ್ಲದ ಲಿಂಗ ಭರಿತದ ಅರಿವು ತನ್ನಲ್ಲಿ ತನ್ನ ಸ್ವರೂಪವಾಗಿ ತಿಳಿದುದರಿಂದ ಅಂಡಜವಳಿದ ದೃಷ್ಟಿ, ಬಸವ ದೃಷ್ಟಿ ನೀಲಾಂಬಿಕೆಯ ದೃಷ್ಟಿ ಒಂದಾದುದರಿಂದ ಅಂಡಜವಳಿದ ಬಸವಾ ಎಂದು ಹೇಳಿಹಳು.

**ಪಿಂಡಜವಳಿದ ಬಸವಾ :**

ಸಕಲ ಮಾನವರು, ಪಿಂಡ ರೂಪಾಗಿ ಹುಟ್ಟಿ ಕಾಣಿಸುವುದರಿಂದ ಪಿಂಡಜವೆಂಬ ನಾಮ ಬಂದಿಹುದು. ಪಿಂಡವದು ಜ್ಞಾನಪಿಂಡ. ಸಕಲ ಮಾನವರಲ್ಲಿ ಜ್ಞಾನ ಅರಿವು ತದ್ಗತವಾದುದರಿಂದ ಇದಕ್ಕೆ ಪಿಂಡಜವೆಂಬ ನಾಮ ಬಂದಿದೆ. ಸಕಲರಲ್ಲಿ ಅರಿವು ತುಂಬಿದ್ದರೂ ಇದನ್ನು ನೋಡಹೋದವರು ಶರಣ-ಶರಣೆಯರು, ಸಂತರು, ಸಮ್ಯಜ್ಞಾನಿಗಳು. ಇವರು ಪಿಂಡಜವೆಂಬುದನ್ನೇ ನಷ್ಟ ಮಾಡಿದವರು. ಈ ಮಹಾಂತರದು ಅರುವಿಂಗರುವಾಗಿಹ ಸ್ವಯ

ದೃಷ್ಟಿ. ಇದು ತನ್ನಲ್ಲಿ ತನ್ನ ಸ್ವರೂಪವಾಗಿಹ ಘನ ದೃಷ್ಟಿ. ಇಂತಪ್ಪ ಮಹದಿರುವು, ಆವ ಪಿಂಡದಲ್ಲಿ ಬೆಳಗುಳ್ಳದ್ದಾಗಿ ಪ್ರಜ್ವಲಿಸುತ್ತಿಹುದೊ ಅಲ್ಲಿ ಪಿಂಡಜವೆಂಬುದು ಅಳಿದು, ಸ್ವತೇಜವಾಗಿದ್ದುದರಿಂದ ಪಿಂಡಜವಳಿದ ಬಸವಾ ಎಂದು ನೀಲಾಂಬಿಕೆಯು ಹೇಳಿಕೊಂಡಿಹಳು.

**ಆಕಾರವಳಿದ ಬಸವಾ :**

ಬಸವರಸರು ಅಸ್ತಿ, ಭಾತಿ ಎಂಬ ಸತ್ಯವರಿತ ಅಭೇದ್ಯ ಸತ್ಯ. ಸತ್ಯ ಮಿಥ್ಯೆವೆಂಬ ಶಬ್ದವ ನಷ್ಟ ಮಾಡಿ ತನ್ನ ಕಂಡರಿದ ಸಮತಾ ನಿಧಿ. ಸಮತೆಯೆ ತನ್ನಿರುವಾಗಿ, ತಾನಾಗಿ ಕಂಡವಂಗೆ ಆಕಾರವೆಂಬುದಿಲ್ಲ. ಅಲ್ಲಿ ಆಕಾರವ ಕಂಡುದು ಹುಸಿ, ಏತರಲ್ಲಿ ಹೆಸರಿಲ್ಲದ ಕುರುಹ. ಈ ವಸ್ತು ಬಸವಯ್ಯನು. ಬ್ರಹ್ಮ ಜಿಜ್ಞಾಸುಗಳಾಗಲಿ, ಬ್ರಹ್ಮವೇತ್ತರುಗಳಾಗಲಿ ನಾಮರೂಪ ಹುಸಿ, ಆತ್ಮ ಸತ್ಯ. ಬ್ರಹ್ಮ ಸತ್ಯ. ಸಚ್ಚಿದಾನಂದ ಸತ್ಯವೆಂಬ ಶೃತಿವಂತರು, ಶಬ್ಧಸಂಭ್ರಮದವರು ಸಿಕ್ಕುತ್ತಾರೆ. ಬಸವರಸರಂತೆ ಚಿದಹಮ್ಮನಳಿದು ಶಬ್ದಮುಗ್ಧರಾಗಿಹ ಅಭೇದ್ಯ ಸತ್ಯವರಿತವರು ಸಿಕ್ಕುವುದು ಬಹು ವಿರಳ.

ಇವರು ಶಬ್ಧ ನಷ್ಟ ಮಾಡಿದ ನಿಶಬ್ದ ವೇದಿಗಳು. ಇವರ ದಿವ್ಯದೃಷ್ಟಿಗೆ ನಾಮರೂಪ ಹುಸಿ. ಇದು ಆದುದಲ್ಲ ಹೋದುದಲ್ಲ, ಬಂದುದಲ್ಲ ನಿಂದುದಲ್ಲ, ಒಳಗಿಲ್ಲ ಹೊರಗಿಲ್ಲವಾಗಿರುವಲ್ಲಿ ಅದು ಭಾವಕ್ಕೊಳಪಟ್ಟುದೆಂತು ? ನಿರ್ಭಾವವೆಂಬುದಕ್ಕಾದರೂ ಒಳಪಟ್ಟುದೆಂತು ? ಬಂಜೆಯ ಮಗನನ್ನು ಶೂನ್ಯವಾಗಿ ಕಂಡುದು ಹೇಗೆ ? ಇದು ಕಾರಣ ನಿತ್ಯಾನಿತ್ಯವ ತಿಳಿದವರು ಶರಣ ಶರಣೆಯರು. ಇವರು ನಿತ್ಯವ ಅನಿತ್ಯವ ವಿಭಾಗಿಸಿ ನೋಡದವರು. ನಿತ್ಯವ ತಿಳಿದುದರಿಂದ ಅನಿತ್ಯವೆಂಬ ನಾಮರೂಪ ಇಲ್ಲಾದುದಿಲ್ಲಾಗಿ ಇದು ಎಂದಿಪ್ಪುದು, ಎಂತಿಪ್ಪುದು ಎಂದು ಗಾಬರಿ ಗೊಂಡವರು.

''ಆನು ನೀನೆಂಬುದಿಲ್ಲ ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ. ಇಲ್ಲಾದುದಿಲ್ಲಾದುದೆಂದಿಪ್ಪುದು, ಇಲ್ಲಾದುದಿಲ್ಲಾದುದೆಂತಿಪ್ಪುದು ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು''. ಶರಣರ ದಿವ್ಯದೃಷ್ಟಿಗೆ ನಾಮರೂಪ ಹುಸಿಯಾದುದು. ಹುಸಿ ಎಂಬುದು ಇಲ್ಲಾದುದಿಲ್ಲಾದುದೆಂದಿಪ್ಪುದು, ಇಲ್ಲಾದುದಿಲ್ಲಾದುದೆಂತಿಪ್ಪುದು ಎಂಬ ಘನದೃಷ್ಟಿ ಇದು ತನ್ನಿಂದ ತನ್ನ ಸ್ವಸ್ವರೂಪವರಿತು ಅದುವೆ ತಾನಾದ ದೃಷ್ಟಿಯಾದುದರಿಂದ ಆಕಾರವಳಿದ ಬಸವ ಎಂದು ಹೇಳಿಹಳು.

**ನಿರಾಕಾರವಳಿದ ಬಸವಾ** : ನಿರಾಕಾರವಳಿದುದು ಸಾಮಾನ್ಯವಲ್ಲ. ಇದು ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗಿಗೆ ಸಾಧ್ಯವು, ಸಹಜವು. ಭ್ರಮಾತ್ಮರಿಗೆ ನಿರಾಕಾರ ರೂಪಿ ಪ್ರಾಣವ ಳಿಯುವುದು ಅಸಾಧ್ಯವು. ಅಜ್ಞಾನಿಗಳಿಗೆ ಪ್ರಾಣವು ಬಹು ಪ್ರಿಯವಾದುದು. ಸುಜ್ಞಾನಿಗೆ ಲಿಂಗಕ್ಕೆ ಲಿಂಗವಾಗಿಹ ಸ್ವಯಂಜ್ಯೋತಿ ಲಿಂಗ ತಾನಾಗಿಹ ತನ್ನಿರುವು ಬಹುಪ್ರಿಯವಾದುದರಿಂದ ಲಿಂಗಪ್ರಾಣಿ ಅರ್ಥಾತ್ ಪ್ರಾಣಲಿಂಗಿ ಎಂದು ಹೇಳಿಹರು.

ಬಸವರಸರು ಅಮರತ್ವದ ಹೊಲಬನರಿತ ಮಹಾಂತ. ಚಿದಂಗ, ಚಿತ್ ಸ್ವರೂಪ ಸಮತೆ ತನ್ನಿರುವಾಗಿಹ ತಾನಾಗಿಹ ಅಜಾತ ಲಿಂಗ. ಇದು ಕೊರಳಲ್ಲಿ ಕೈಯಲ್ಲಿ ಧರಿಸಿದ ಪೂಜಾಲಿಂಗವಲ್ಲ. ಇದನ್ನು ತನ್ನಿಂದ ಬೇರೆ ಮಾಡಿ ವಸ್ತ್ರದಲ್ಲಿ ಕಟ್ಟುವ ಲಿಂಗವಲ್ಲ. ಇಂತಪ್ಪ ಮಹಾಲಿಂಗವೆ ತಾನಾಗಿಪ್ಪ ಶರಣನಾದುದರಿಂದ ನಿರಾಕಾರವಳಿದ ಬಸವನೆಂದು ಹೇಳಿಹರು.

**ಸಂಗವಳಿದ ಬಸವಾ :**

ದೇಹ, ಇಂದ್ರಿಯಂಗಳ ಸಂಗ ವಳಿದ ಬಸವ. ದೇಹಿಗೆ ದೇಹಿಯಾಗಿಹ ನಿರ್ದೇಹಿ ಮಹಾಂತ. ಅಳಿದುದು ಉಳಿದುದು ದೇಹವಲ್ಲದೆ ತಾನಲ್ಲ. ತಾನಾಗದ ದೇಹ ಅಳಿದರೂ ಅದರ ಸಂಗಿಯಲ್ಲ. ಉಳಿದು ತೋರಿದರೂ ಅದರ ಸಂಗಿಯಲ್ಲ. ಅದು ಸೊಕ್ಕಿದರೂ ಅದರ ಸಂಗಿಯಲ್ಲ. ಸೊರಗಿದರೂ ಅದರ ಸಂಗಿಯಲ್ಲ. ಬಸವರಸ ಅತೀಂದ್ರಿಯನಾದುದರಿಂದ

ಇಂದ್ರಿಯಂಗಳ ಶುಭಕಾರ್ಯದ ಸಂಗಿಯು ಅಲ್ಲ. ಅಶುಭ ಕಾರ್ಯದ ಸಂಗಿಯೂ ಅಲ್ಲ. ಕಣ್ಣಿನ ಕಣ್ಣಾದವನು, ಕಿವಿಯ ಕಿವಿಯಾದವನು, ಘ್ರಾಣದ ಘ್ರಾಣದವನು. ವಾಣಿಯ ವಾಣಿಯಾದವನು. ತ್ವಕ್ಕಿನ ತ್ವಕ್ಕಾದವನು. ಇದು ಕಾರಣ ಇಂದ್ರಿಯಂಗಳ ಶುಭಾಶುಭದ ಸಂಗಿಯಾಗದ್ದರಿಂದ ಸಂಗವಳಿದ ಬಸವನೆಂದು ಹೇಳಿಹರು.

**ಅಸಂಗವಳಿದ ಬಸವಾ :**

ಅರುವಿಂಗರುವಾಗಿಹ ಮಹಾಮಹಿಮನಾದುದರಿಂದ ಆತ್ಮ, ಸಾಕ್ಷಿ, ಅಸಂಗ, ದೃಕ್, ಸ್ವಯಂಪ್ರಕಾಶ ಕೂಟಸ್ಥನೆಂಬುದು ನಷ್ಟ ಮಾಡಿದುದರಿಂದ ಅಸಂಗವಳಿದ ಬಸವ. ಆತ್ಮನೆಂಬುದು ಅದು ಅಸಂಗ. ಸಾಕ್ಷಿಯೆಂಬುದು ಅಸಂಗ. ದೃಕ್ ಎಂಬುದು ಅಸಂಗ. ಸ್ವಯಂಪ್ರಕಾಶವೆಂಬುದು ಪರಪ್ರಕಾಶಕ್ಕೆ ಅಸಂಗ. ಬಸವಯ್ಯ ಅರುವು ತಾನಾಗಲಿಲ್ಲ ನುಡಿಗೊಳಪಟ್ಟ ಅರುವು ತಾನಾಗಬಲ್ಲ. ಅರುವಿಂಗರುವು. ಅದು ತಾನೆ ನುಡಿಗೆಡೆಗೊಡದ ಘನವಾದುದರಿಂದ ಅಸಂಗವಳಿದ ಬಸವಾ ಎಂದು ಹೇಳಿಹಳು.

***ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವಾ :***

ತೆರಹಿಲ್ಲದ ಲಿಂಗಭರಿತವೆಂಬುದು ಅರಿಯ ಹೋಗಿ, ನಾಮ ನಿರ್ನಾಮವಾಗಿ ಲಿಂಗಭರಿತವೆಂಬುದು ಹೆತ್ತರಿವು ಆಗಿ, ತಾನೆ ಸ್ವಯಂಜ್ಯೋತಿ ಲಿಂಗವೆಂಬ ಘನದಿರುವು ಕಂಡು, ಘನಕ್ಕೆ ಘನನಾಗಿ ಶಬ್ಧಮುಗ್ಧ ನಾದುದೆ ಸಂಗಯ್ಯನಲ್ಲಿ ಸ್ವಯಲಿಂಗಿಯಾಗಿಹ ಸಂಕೇತವೆಂದು ಹೇಳಿಹಳು.

# ಭಾವದ ಬಯಲಿಗೆ ಬಣ್ಣವಿಟ್ಟ ಬಸವಯ್ಯ

**ಅನುಭಾವದ ಸಾರವೆ, ನಿಜಸಾರವಾಗಿ ನಿಂದನೆಮ್ಮ ಬಸವಯ್ಯನು.**
**ವಿವೇಕದ ಸಂಗವೆ, ನಿಜಸಂಗವಾಗಿ, ನಿಂದನೆಮ್ಮ ಬಸವಯ್ಯನು.**
**ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು.**
**ಇತರೇತರ ಮಾರ್ಗವಳಿದು ಗಮನ ನಾಸ್ತಿಯಾದನೆಮ್ಮ ಬಸವಯ್ಯನು.**
**ಸಂಗಯ್ಯನಲ್ಲಿ ಉಭಯ ಕುಳನಾಸ್ತಿಯಾದ ನಮ್ಮ ಬಸವಯ್ಯನು.**

**ತಾತ್ಪರ್ಯ : *ಅನುಭಾವದ ಸಾರವೆ, ನಿಜಸಾರವಾಗಿ ನಿಂದನೆಮ್ಮ ಬಸವಯ್ಯನು :***

ಅನುಭಾವವದು ವ್ಯಾಪಕಾಕ್ಷರದ ಅನುಭವ. ಅದು ಅತೀಂದ್ರಿ ಗಗನ ಸದೃಶವಾಗಿಹ ಜ್ಞಾನಾಮೃತ ಸಾರವದು. ಇದು ಅಖಂಡ ಜ್ಞಾನಾಮೃತ. ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು. ತನ್ನಲ್ಲಿ ತಾನಾಗಿ ಕಂಡ ಸಾರಾಮೃತ. ಇದು ಅನುಭಾವ ಸಾರವು. ಇದು ನಿಜೈಕ್ಯನಾಗಿಹ ನಿಜವೆನ್ನದ ಶಬ್ದಮುಗ್ಧ ಸಾರ. ಸುಖದ ಸುಖವಾಗಿಹ ತನ್ನಿರುವಿನ ಅರುವು, ಅರುವೆನ್ನದ ಅರುವು. ಇದು ಶಬ್ಧಮುಗ್ಧ. ಇಂತಪ್ಪ ಮಹದರುವೆ ನಿಜ ಸಾರವಾಗಿ ನಿಂದನೆಮ್ಮ ಬಸವಯ್ಯನು ಎಂದು ವರ್ಣಿಸಿಹಳು.

ವರ್ಣಾತೀತ ವರ್ಣನೆ, ಮೂಕನಾಗಿ ಮೂಕತ್ವದಲ್ಲಿಹ ನಿಬ್ಬೆರಗು ಇದು ಅನುಭಾವದ ಸಾರ. ಈ ಸಾರವೆ ನಿಜ ಸಾರವಾಗಿ ನಿಂದನೆಮ್ಮ ಬಸವಯ್ಯನು. ಎಮ್ಮ ಬಸವಯ್ಯ ಬಯಲಾನುಭಾವಿ, ಭರಿತಾನುಭಾವಿ, ತೆರಹಿಲ್ಲದ ಘನಾನುಭವಿ, ಸ್ವಯಾನುಭವಿ, ನುಡಿಗೆಡೆಗೊಡದ ಘನಾನುಭವಿ, ವರ್ಣಿಸ ಹೋಗಿ ತೆರಹಿಲ್ಲದ ಲಿಂಗ ಭರಿತವೆಂಬ ನಾಮವೆ ನಿರ್ನಾಮವಾಗಿ ಪ್ರಶಾಂತ ಸ್ಥಿತಿಯೆ ತನ್ನದಾಗಿ ತಾನಾಗಿ ಅಗಮ್ಯದಲ್ಲಿ ಗಮನ ಗೆಟ್ಟು ನಿಂದಲ್ಲಿ ನಿರಾಳನಾಗಿ ನಿಂದನೆಮ್ಮ ಬಸವಯ್ಯನು ಎಂದು ವರ್ಣಿಸಿಹಳು ಕೊಂಡಾಡಿಹಳು.

**ವಿವೇಕದ ಸಂಗವೆ ನಿಜ ಸಂಗವಾಗಿ ನಿಂದನೆಮ್ಮ ಬಸವಯ್ಯನು :**

ಬಸವಯ್ಯನ ವಿವೇಕದ ಸಂಗ ಅದಾರಿಗೆ ? ಒಂದು ಬಿಟ್ಟು ಒಂದು ಹಿಡಿಯುವ ಸಂಗವಲ್ಲ. ಅಹುದಾದುದು ಕಂಡವನಲ್ಲ. ಅಲ್ಲಾದುದು ಕಂಡವನಲ್ಲ. ಶಬ್ದ ಹಂಗಿನಲ್ಲ. ನಿಶಬ್ದ ವೇದಿಯಾದ ಘನ ಸಂಗ. ಅದು ಸಮಪ್ರಕಾಶವಾಗಿಹ ತನ್ನಿರುವಿನ ವಿವೇಕದ ಸಂಗ. ಇದು ಅವಿವೇಕ, ವಿವೇಕವನ್ನು ಮೀರಿದವರ ವಿವೇಕ. ಇದು ಸಂಗ ಅಸಂಗವೆಂದು ವಿಭಾಗ ಮಾಡದ ನಿರವಧಿ ವಿವೇಕ. ಇದು ನಾಶ ಅವಿನಾಶವೆಂದು ಸೀಮೆಯನ್ನು ಮಾಡದ ಸುಜ್ಞಾನದ ವಿವೇಕ. ಇದು ಮರವು ಇದು ಅರುವು, ಇದು ಅಜ್ಞಾನ, ಇದು ಜ್ಞಾನ, ಇದು ಬಂಧ, ಇದು ಮೋಕ್ಷ, ಇದು ದ್ವೈತ, ಇದು ಅದ್ವೈತವೆಂಬ ವಿಭಾಗ ದೃಷ್ಟಿಯನ್ನೇ ನಷ್ಟ ಮಾಡಿ ಸಮತೆಯೆ ತನ್ನಿರುವಾಗಿ ತಾನಾಗಿ ನಿಂತ ಘನ ವಿವೇಕ. ಇಂತಪ್ಪ ವಿವೇಕದ ಸಂಗ ತನ್ನ ಸಂಗ. ಘನಕ್ಕೆ ಘನವಾಗಿ ತನ್ನಿರುವಿನಲ್ಲಿ ತಾನಾಗಿ ನಿಂತ ಸಂಗ. ಇದು ನಿಜ ಸಂಗ. ಇಂತಪ್ಪ ನಿಜ ಸಂಗದಲ್ಲಿ ನಿಂತವರು ಅವರು ನಮ್ಮ ಬಸವಯ್ಯನೆಂದು ವರ್ಣಿಸಿಹಳು.

**ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು :**

ಭಾವರೂಪ ಬಯಲಿಂಗೆ ಭರಿತವೆಂಬ ಬಣ್ಣವಿಟ್ಟನೆ ! ಇದೆಂಥ ಬಣ್ಣ ? ಇದೆಂಥ ಭಾವ? ಇದೆಂಥ ಬಯಲು ? ಭಾವವದು ಭರಿತ. ಬಯಲು ಅದು ವ್ಯರ್ಥ ಮಾತು. ಇಂತಪ್ಪ ವ್ಯರ್ಥ ವಾದಕ್ಕೆ ಶಬ್ದಮುಗ್ಧವಾಗಿಹ ಘನ. ಇದು ಸತ್ಯಜ್ಞಾನಾನಂದವಾಗಿಹ ಬಯಲು. ಇದು ತೆರಹಿಲ್ಲದ ಲಿಂಗ ಭರಿತವೆಂಬ ಬಣ್ಣವಿಟ್ಟನೆಮ್ಮ ಬಸವಯ್ಯನು.

ಎಲ್ಲಿ ಭಾವ, ಅದು ಬಯಲು. ಬಯಲಾವುದು ಅದು ಭರಿತವು ಎಂದು ಬಣ್ಣವಿಟ್ಟನೆ ? ಅಹಹ ಇದನಾರಯ್ಯ ಒಂದಾಗಿ ಕಂಡವರು. ಭಾವವದು ಬಯಲು. ಬಯಲವದು ಬಣ್ಣ. ಬಣ್ಣವದು ತೆರಹಿಲ್ಲದ ಲಿಂಗ ಭರಿತವೆಂಬ ನಾಮ. ಇಂತಪ್ಪ ಘನದ ಮಾಟವ ಮಾಡಿ ಕರಕಮಲದಲ್ಲಿಟ್ಟನೆ ? ಇದೆಂಥ ಮೂಕನ ಕಾರುಣ್ಯ. ಮಾತಿಲ್ಲದವನ ಕಾರುಣ್ಯ. ಮಾತಿಲ್ಲದವನಾಗಿ ಅರಿಯ ಹೋದಡೆ ಕಾರುಣ್ಯ ಕರಗಿತ್ತು. ಬಣ್ಣದ ಹಿರಿಮೆ ಪ್ರಜ್ವಲಿಸಿತ್ತು. ಇದು ಮಾತಿಲ್ಲದವನ ಪ್ರಭೆ. ಸ್ವಪ್ರಭೆಯ ಬಣ್ಣವಿಟ್ಟನೆಮ್ಮ ಬಸವಯ್ಯನು ಎಂದು ಹೇಳಿಹಳು.

**ಇತರೇತರ ಮಾರ್ಗವಳಿದು ಗಮನ ನಾಸ್ತಿಯಾದನೆಮ್ಮ ಬಸವಯ್ಯನು :**

ಪ್ರಥಮ ವೇದಗಳ ಗತಿ ಮತಿ ಎಂಬ ಮಾರ್ಗವನಳಿದು. ಇತ್ತ ಅತೀತ ಅನಾಗತರೆಂಬ ನುಡಿಯಲ್ಲಿ ಸಿಲುಕಿದವನ ಮಾರ್ಗವನಳಿದು ಶೃತಿವಂತರೆಲ್ಲ ಆಗಮದಲ್ಲಿ ಸಿಲುಕಿದ ಮಾರ್ಗವನಳಿದು, ನುಡಿದ ನುಡಿಯ ಮಾರ್ಗದಲ್ಲಿ ನಡೆಯದ ಮಾರ್ಗವ ತೋರಿಸಿದ. ನಡೆದ ನಡೆಯ ನುಡಿಯದ ಮಾರ್ಗ ತೋರಿಸಿದ. ಬಂದಲ್ಲಿ ಬಾರದ ಮಾರ್ಗವ ತೋರಿದ. ನಿಂದಲ್ಲಿ ನಿಲ್ಲದ ಮಾರ್ಗವ ತೋರಿದ. ಅಚಲಿತವಾದ ಘನದಿರುವೆ ತನ್ನಿರುವಾಗಿ, ತಾನೆ ಅದುವೆ ಆಗಿಹುದರಿಂದ, ಗಮನ ನಾಸ್ತಿಯಾದ ನೆಮ್ಮ ಬಸವಯ್ಯನು ಎಂದು ಹೇಳಿಹಳು.

ತೋರಿ ಇಲ್ಲವಾಗುವ ಕಲ್ಪಿತನ ಕಾರ್ಯಂಗಳೆಲ್ಲ ಇತರೇತರ ಮಾರ್ಗವೆಂದು ತಿಳಿದು, ಇವುಗಳ ಸ್ವೀಕರಿಸಲಿಲ್ಲ, ತೋರಬಾರದ ಘನದಿರುವೆ, ತನ್ನಿರುವಾಗಿ, ತಾನೆ ಅದುವೆ ಆಗಿಹುದರಿಂದ ಗಮನ ನಾಸ್ತಿಯಾದನೆಮ್ಮ ಬಸವಯ್ಯನು ಎಂದು ಹೇಳಿಹಳು. ಇದಲ್ಲದೆ ಹೇಳಬಾರದ ಘನವೆ ತಾನಾಗಿಹ ಘನದಿರುವಿಂಗೆ ಏನನ್ನಬೇಕು. ನಾಹಂ ಎನ್ನಲೆ ಬಾರದು, ಕೋಹಂ ಎನ್ನಲೆ ಬಾರದು, ಸೋಹಂ ಎನ್ನಲೆ ಬಾರದು, ಚಿದಹಂ ಎನ್ನಲೆ ಬಾರದು. ದಾಸೋಹಂ ಎನ್ನಲೆ ಬಾರದು. ಇಂತಪ್ಪ ಇತರೇತರ ಮಾರ್ಗವಳಿದು, ಅಖಂಡಿತನ ನಿಲುವೆ ತನ್ನದಾಗಿಪ್ಪದರಿಂದ ಗಮನನಾಸ್ತಿಯಾದನೆಮ್ಮ ಬಸವಯ್ಯನು ಎಂದು ಕೊಂಡಾಡಿಹಳು.

**ಸಂಗಯ್ಯನಲ್ಲಿ ಉಭಯ ಕುಳ ನಾಸ್ತಿಯಾದ ನಮ್ಮ ಬಸವಯ್ಯನು :**

ತೆರಹಿಲ್ಲದ ಲಿಂಗ ಭರಿತವೆಂಬ ನಾಮ ವಿಡಿದು ಅರಿದರಿದು ನೋಡಲು ಸಂಗಯ್ಯ ನೆಂಬ ಕುಳವು ನಾಸ್ತಿ, ಇತ್ತ ಭಕ್ತನೆಂಬ ಕುಳವು ನಾಸ್ತಿಯಾಗಿ ನಿರ್ನಾಮವು ಸಿದ್ಧವಾಯಿತ್ತು. ನಿಷ್ಪತ್ತಿಯಾಯಿತ್ತು. ಅಗಮ್ಯದಲ್ಲಿ ಗಮನ ಗೆಟ್ಟಿತ್ತು ಕೂಡಲ ಚೆನ್ನಸಂಗಯ್ಯನಲ್ಲಿ, ಶಬ್ದ ಮುಗ್ಧವಾಯಿತ್ತು. ಶಬ್ದ ಮುಗ್ಧವಾದುದು ಸಂಗಯ್ಯನಲ್ಲಿ ಉಭಯ ಕುಳನಾಸ್ತಿಯಾದುದು ನಮ್ಮ ಬಸವಯ್ಯನ ನಿಲುವು. ಇಲ್ಲಿ ಬಸವಯ್ಯನ ನಿಲುವು ಸಂಗಯ್ಯನ ನಿಲುವು ಒಂದಾದ ನಿಲುವು. ಇದು ಅಭೇದ್ಯ ನಿಲವು, ಅಪ್ರಮಾಣ ನಿಲುವು ಎಂದು ಹೇಳಿಹಳು.

## ಶಬ್ದ ಕರಗಿಸುವ ರಹಸ್ಯ

**ಅಪ್ರಮಾಣದ ತ್ರಾಣದಲ್ಲಿ**
**ಅಘೋರ ವಕ್ತ್ರ ಸಂಭಾಷಣೆಯ ಮಾಡಲು**
**ಬಸವಯ್ಯನ ರೂಪು ಎನುತ್ತಿದ್ದೆನು**
**ಸಂಗಯ್ಯನಲ್ಲಿ ಪ್ರಭೆಯಳಿಯಿತ್ತು ಬಸವಾ.**

**ತಾತ್ಪರ್ಯ : *ಅಪ್ರಮಾಣದ ತ್ರಾಣದಲ್ಲಿ ಅಘೋರ ವಕ್ತ್ರ ಸಂಭಾಷಣೆಯ ಮಾಡಲು ಬಸವಯ್ಯನ ರೂಪು ಎನುತ್ತಿದ್ದೆನು* :**

ಅಪ್ರಮಾಣದ ತ್ರಾಣ ? ಓಹೋ ! ಅಪ್ರಮಾಣ ! ಈ ಮಹವ, ನುಡಿಗೆ ತಂದವರಾರು ! ಅಪ್ರಮಾಣವೆಂಬ ರಹಸ್ಯವ ಶಬ್ದಕ್ಕೆ ತಂದವರಾರು ! ಬಸವರಸನು ಈ ಮಹದರುವಿನ ಮಹತ್ಕಾರ್ಯಕ್ಕೆ ಮೂಲಿಗನಾದನೆ ! ಕಾರಣನಾದನೆ ! ಕಾರಣದ ಕಾರ್ಯವನ್ನು ನೀಲಾಂಬಿಕೆಯು ಪ್ರಕಟಗೊಳಿಸಿದಳೆ ! ಇದೆಂಥ ಅಭೇದ್ಯವ ಬೇಧಿಸುವ ಸಾಹಸ, ಇವರೀರ್ವರಲ್ಲಿಯೆ ಅಪ್ರಮಾಣದ ರಕ್ಷಣೆ, ಇವರಲ್ಲಿಯೇ ತ್ರಿವಿಧ ಶಾಂತಿ ಮಾಡುವ ಶಾಂತಾತ್ಮನ ವಕ್ತೃತ್ವ. ಇವರಲ್ಲಿಯೆ, ಸಮತೆಯೆ ತನ್ನದಾಗಿರುವ ಸ್ವಸ್ವರೂಪ, ಪ್ರಕಟಗೊಳಿಸುವ ಸಂಭಾಷಣೆ ಇವೆರಡು ಶಬ್ದವ ಕರಗಿಸುವ ಮಾತಿಲ್ಲದವನ ಸಂಭಾಷಣೆ. ಮಾತನಳಿದ ಸಂಜ್ಞೆ. ಅಲ್ಲಿಯೇ ಅಪ್ರಮಾಣದ ರಕ್ಷಣೆ, ಅಲ್ಲಿಯೇ ವಕ್ತೃತ್ವ, ಅದುವೆ ವಾಕ್ ವೈಖರಿ, ಇದುವೆ ಮಹವು ಮಹದಾನಂದದ ಲಕ್ಕಾಡಿ ಮತ್ತಲ್ಲಿಯೇ ಲೀಯವಾಗಿರ್ದ ಅನಂತಕಾಲ. ಇಂತಪ್ಪ ಶರಣ-ಶರಣಿಯರು ಮಹಾನಂದದಲ್ಲಿ ಲಕ್ಕಾಡಿದುದು ಅದುವೆ ಅಪ್ರಮಾಣದ ರಕ್ಷಣೆಯಾಗಿದೆ, ಜೋಪಾನವಾಗಿದೆ. ಶಬ್ದ ಕರಗಿಸುವ ರಸಹ್ಯವೆ ಅಪ್ರಮಾಣದ ರಕ್ಷಣವಾಗಿದೆ. ಶಬ್ದ ನಷ್ಟ ಮಾಡುವ ಗುರಿ, ಅದು ಅಪ್ರಮಾಣದ ಜೋಪಾನವಾಗಿದೆ. ಅದು ನಿಃಶಬ್ದವೇದದ ನಾಂದಿಯಾಗಿದೆ.

ಅಪ್ರಮಾಣವು ಅಪ್ರಕಟದ ಪ್ರಕಟನೆ ನೋಡಾ, ಮಾತಿಲ್ಲದವನಿಗೆ ಮಾತಿಲ್ಲದವನೆಂದು ಮಾತಿನಿಂದಲೆ ತಿಳಿಸಿ, ಮಾತನ್ನೆ ಕರಗಿಸುವ ಮಾತನಳಿವ ಗುಟ್ಟು ನೋಡಾ, ಇದು ಮಾತನಾಡಿ ಮಾತನಾಡದಂತಿರುವ ರಹಸ್ಯ ನೋಡಾ, ಇದು ಅಪ್ರಮಾಣದ ರಕ್ಷಣೆ. ತನ್ನ ರಕ್ಷಣೆ, ತನ್ನಿಂದ ತನ್ನ ರಕ್ಷಣೆ, ಸ್ವಸ್ವರೂಪ ರಕ್ಷಣೆ, ಇಂತಪ್ಪ ಘನಕ್ಕೆ ಘನವಾಗಿಹ ಮಹದರುವಿನ ರಕ್ಷಣೆಯೆ ಅಪ್ರಮಾಣದ ರಕ್ಷಣೆಯು, ಇಂತಪ್ಪ ರಹಸ್ಯ ಆವ ಹೃತ್ಕಮಲದಲ್ಲಿ ಸುಶೋಭೆಯಂ ಪ್ರಜ್ವಲಿಸುತ್ತಿಹುದು ಅಲ್ಲಿಯೇ ಪ್ರಶಾಂತನ ನಿಲುವು ನೆಲೆಗೊಂಡು ಮಾತಿಲ್ಲದವನಾಗಿ ಮಾತಿಲ್ಲದ ಘನದಿರುವ ಸೂಚಿಸುತ್ತಿಹುದು. ಅದುವೆ ಅಘೋರ ವಕ್ತ್ರವಾಗಿಹುದು.

ಪರಮ ಶಾಂತಾತ್ಮ ವಕ್ತೃತ್ವ ಅದಾರಿಗೆ ? ಶರಣ ಶರಣೆಯರ ಸಂತೋಷದ ವಕ್ತೃತ್ವ ಅದಾರಿಗೆ ? ಒಡಲಳಿದ ಶರಣರ ಪರಮ ಸಂತೋಷದ ಸಂಬೋಧ ಅದಾರಿಗೆ ? ಆಚಾರ ಅಗೋಚರ ನೋಡಾ. ಇದು ಒಡಲಳಿದ ಶುದ್ಧಾಚಾರವು. ಆವಲ್ಲಿ ಶುದ್ಧಾಚಾರ ನೆಲೆಗೊಂಡಿಹುದು, ಅಲ್ಲಿಯೇ ಶಬ್ಧ ಕರಗಿಸುವ ಶುದ್ಧ ಪ್ರಸಾದ, ಸಿದ್ಧ ಪ್ರಸಾದ, ಪ್ರಸಿದ್ಧ ಪ್ರಸಾದ, ಈ ಮೂರೊಂದಾದ ಮಹಾಪ್ರಸಾದ. ಸುಬೋಧವು ನೆಲೆಗೊಂಡಿಹುದು ಅಲ್ಲಿಯೆ. ಸಮತೆಯೆ ತನ್ನಿರುವಾಗಿಹ ತಾನಾಗಿಹ ಸಂಭಾಷಣೆ, ಇಂತಪ್ಪ ಮಹದರುವ ಕರುಣಿಸುವುದು. ಅದು ಬಸವಯ್ಯನ ರೂಪು ಎನ್ನುವದಾಗಿದೆ.

ಬಸವಯ್ಯನ ರೂಪು ಅಪ್ರಮಾಣ ರಕ್ಷಣೆ ಮಾಡುವ ರೂಪು ಪ್ರಶಾಂತನ ತೋರಿಸಲು ಬಂದ ರೂಪು, ಈ ಮಹವು ಬಂದ ಮಹತ್ಕಾರ್ಯ ಅರಿತವರಾರು ?

ಪ್ರಥಮ ವೇದಿಗಳು ಬಸವಯ್ಯನ ರೂಪು ಕಾಣಲಿಲ್ಲ, ಅತೀತ ಅನಾಗತರೆಂಬ ಮಧ್ಯಮ ವೇದಿಗಳು ನುಡಿಯಲ್ಲೆ ಸಿಲುಕಿ, ಬಸವಯ್ಯನ ರೂಪು ಕಾಣಲಿಲ್ಲ. ಶೃತಿವಂತರೆಲ್ಲ ಆಗಮದ ಶಬ್ಧ ಜ್ಞಾನದಲ್ಲಿ ಸಿಲ್ಕಿ ಬಸವಯ್ಯನ ರೂಪು ಕಾಣಲಿಲ್ಲ. ಇವರು ಅಪ್ರಮಾಣದ ರಕ್ಷಣೆ ಮಾಡುವ ಭಾಗ್ಯವಂತರಾಗದೆ ಭಾಗ್ಯಹೀನರಾದರು. ಅಪ್ರಮಾಣ ರಕ್ಷಣೆ ಅದಾರಿಗೆ ? ಗುರುಲಿಂಗದುದಯ, ಶಿವಲಿಂಗದುದಯ, ನಿರ್ಲಿಖಿತ ಜಂಗಮದುದಯ ಅದಾರಿಗೆ ?

''ಒಲಿದು ಒಲಿಸಿಕೊಳ್ಳಬೇಕು, ಒಲಿದಲ್ಲದೆ ಇಲ್ಲ, ಹಲವು ಕೊಂಬಿಗೆ ಹಾರದಿರು ಮರುಳೆ, ಅಟ್ಟಿನೊಡುವ, ತಟ್ಟಿನೋಡುವ, ಮುಟ್ಟಿನೋಡುವ, ಒತ್ತಿನೋಡುವ ನಿಷ್ಠೆ ಬಿಡದಿರ್ದಡೆ ತನ್ನನ್ನೀವ ಮಹಾಲಿಂಗ ಕಲ್ಲೇಶ್ವರಾ''.

ಅಪ್ರಮಾಣದ ರಕ್ಷಣೆಯ ಜವಾಬ್ದಾರಿಯು ಮಹಾಘನ ಶ್ರೀಗುರುವಿನದ್ದಾಗಿಹುದು. ಅಂತಪ್ಪ ಮಹದರುವು ಬೆಳಗಿಸುವ ಕರುಣೆಯು ಗುರುಲಿಂಗದುದಯದ್ದಾಗಿಹುದು. ಈ ಮಹಕಾರ್ಯ ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡವೆಂಬ ಕಾಂಡತ್ರಯದವರು ಗುರುಲಿಂಗದುದಯ ತಮ್ಮ ಅಂತರಂಗದಲ್ಲಿ ಕಾಣಲಿಲ್ಲ. ಕೆಲಬರು ಕಾಣುವ ಗುರು ಕಂಡರಲ್ಲದೆ ಕಾಣಬಾರದ ಗುರು ಕಾಣಲಿಲ್ಲ, ಕಾಣುವ ಶಿವನ ಕಂಡರಲ್ಲದೆ ಅಭೇದ್ಯ ಶಿವನಾಗಿಹ ಶಿವ ಲಿಂಗವ ತನ್ನಲ್ಲಿ ಕಾಣಲಿಲ್ಲ. ಗಮನಿ ಜಂಗಮವ ಕಂಡರಲ್ಲದೆ, ನಿರ್ಗಮನಿ ಜಂಗಮವ ಕಾಣಲಿಲ್ಲ. ಹೀಗಾಗಿ ಸಟೆಯ ಕಂಡರಲ್ಲದೆ ದಿಟವ ಕಾಣಲಿಲ್ಲ. ಬಹು ಭಕ್ತರಲ್ಲಾಗಲಿ, ಶಿಷ್ಯರುಗಳಲ್ಲಾಗಲಿ, ಜಿಜ್ಞಾಸುಗಳಲ್ಲಾಗಲಿ ದಿಟವ ಕಾಣುವ ತೀವ್ರತೆಯ ಹೃದಯ ಸಿಕ್ಕುವುದು ದುರ್ಲಭವಾಗಿದೆ. ಕಾರಣ, ಬೋಧ ನಷ್ಟ ಮಾಡುವ ಗುರುವು ಆ ಮಹಾಂತ ಮಹಾಘನ. ಅಂತಪ್ಪ ಮಹಾಘನ ಗುರುವನೊಲಿಸುವುದು, ಒಲಿದಲ್ಲದೆ ಇಲ್ಲವೆಂದು ಹೇಳಿಹಳು.

ಆವ ಹೃದಯ ಗುರುಲಿಂಗ ಒಲಿಸುವ ಹೃದಯವಾಗಿದೆ; ಅಲ್ಲಿಯೇ ಅರುವಿಂಗರುವಾಗಿಹ ತನ್ನನ್ನೆ ಪ್ರಜ್ವಲಿಸುವ ಕರುಣೆಯಾಗಿದೆ. ಇದು ಕಾರಣ ಅಪ್ರಮಾಣ. ರಕ್ಷಣೆ ಮಾಡಲು ಬಂದ ಗುರುಲಿಂಗ ಸ್ವಯಲಿಂಗ, ನಿರ್ನಾಮಿಯಾಗಿಹ ಜಂಗಮಲಿಂಗ ಈ ಮೂರನ್ನು ಕುರುಹಾಗಿ ಕಾಣಬಾರದು. ಕಂಡವಂಗೆ ಅಪ್ರಮಾಣದ ರಕ್ಷಣೆಯಾಗದು. ಪರಮ ಶಾಂತಿಯ ವಕ್ತೃತ್ವ ಬಾರದು. ಇದಲ್ಲದೆ ಸಮತೆಯೆ ತನ್ನದಾಗಿಹ ತನ್ನಿರುವಿನ ಅನುವು ಕಾಣದು ಇದು ಕಾರಣ ಒಲಿದು ಒಲಿಸಿಕೊಳ್ಳುವುದು ಎಂದು ಹೇಳಿಹರು.

**ಸಂಗಯ್ಯನಲ್ಲಿ ಪ್ರಭೆಯಳಿಯಿತ್ತು ಬಸವಾ** : ಅರಿಯಲಿಲ್ಲದ ಅರುವಾಗಿಹ ಸಂಗಯ್ಯ

ನಲ್ಲಿ ದೃಕ್ ರೂಪ ಆತ್ಮ ಆನೆಂಬ ಪ್ರಭೆಯಳಿಯಿತ್ತು ಬಸವಾ, ಆರದು ಅರಿಯಲಿಲ್ಲದ ಅರುವೆ ತನ್ನದಾಗಿದೆ. ಅವರು ಸಂಗಯ್ಯನಲ್ಲಿ ಶಬ್ಧಮುಗ್ಧವಾಗಿಹ ಮಹದರುವು ತನ್ನದಾದುದರಿಂದ ಸಂಗಯ್ಯನಲ್ಲಿ ಚಿದಹಮ್ಮಿನ ಪ್ರಭೆಯಳಿಯಿತ್ತು ಬಸವಾ ಎಂದು ಹೇಳಿಹಳು.

# ಅಮೃತ ಡೋವಿ

**ಅಮೃತ ಡೋವಿಗೆಯೊಳಗೆ ಅಮೃತ ಡೋವಿಗೆ**
**ಪ್ರಸಾದದ ಕುರುಹಿಲ್ಲ ಬಸವಗೆ. ಆ ಪ್ರಸಾದಕ್ಕೆ ರೂಹಿಲ್ಲದ**
**ಮೂರ್ತಿಯ ಕಂಡು, ಸಂಗಯ್ಯನಲ್ಲಿ ನಿಜ ಸುಖಿಯಾದ ಬಸವಾ.**

**ತಾತ್ಪರ್ಯ : ಅಮೃತ ಡೋವಿಗೆಯೊಳಗೆ ಅಮೃತ ಡೋವಿಗೆ ಪ್ರಸಾದದ ಕುರುಹಿಲ್ಲ ಬಸವಗೆ :**

ಡೋವಿ ಕಂಡವರುಂಟು. ಡೋವಿಗೆಯೊಳಗೆ ಡೋವಿಕಂಡವರುಂಟು. ಡೋವಿಗೆಯಲ್ಲಿ ಬರಹ ಕಂಡವರುಂಟು. ಅಮೃತ ಡೋವಿಗೆಯೊಳಗೆ ಅಮೃತ ಡೋವಿ ಕಂಡವರು ಬಸವಾದಿ ಪ್ರಮಥರು. ಬಸವಾದಿ ಪ್ರಮಥರು ಕಂಡುದು ದೇವಗಣ ರುದ್ರಗಣ ಕಂಡುದಿಲ್ಲ. ಇವರ ಕಂಡುದು ನರರು ಸುರರು ಕಂಡುದಿಲ್ಲ.

ಪೂರ್ವದಲ್ಲಿ ನಾರದ ಮಹರ್ಷಿಗಳು ಭೂಲೋಕದಿಂದ ಕೈಲಾಸಕ್ಕೆ ಹೋಗುವಾಗ ಹಾದಿಯಲ್ಲಿ ಸ್ಮಶಾನವ ಕಂಡ. ಆ ಸ್ಮಶಾನದಲ್ಲಿ ಒಂದು ವಿಚಿತ್ರವಾದ ಡೋವಿ ಕಂಡ. ಆ ಡೋವಿಗೆಯಲ್ಲಿ ಹೀಗೆ ಬರೆದ ಬರಹ ಕಂಡು ಆಶ್ಚರ್ಯನಾದ. ಸತ್ತ ಮೇಲೆ ಕಿಂಚಿತ್ತ ಪುಣ್ಯವೆಂದು ಬರೆದಿತ್ತಂತೆ. ಆಗ ನಾರದರು ಪರಿಶೋಧಿಸಿದರು. ಈ ಡೋವಿಗೆ ಸತ್ತ ಮೇಲೆ ಅದಾವ ಕಿಂಚಿತ್ತ ಪುಣ್ಯವಿರಬೇಕು? ಈ ವಿಷಯ ಕೈಲಾಸದಲ್ಲಿ ಚರ್ಚಿಸೋಣವೆಂದು ಆ ಡೋವಿಗೆಯನ್ನು ತನ್ನ ಜೋಳಿಗೆಯಲ್ಲಿ ಹಾಕಿಕೊಂಡು ಕೈಲಾಸಕ್ಕೆ ನಡೆದ.

ಈ ವಿಷಯವನ್ನು ಕೈಲಾಸದಲ್ಲಿ ದೇವಗಣದ ಸಮೂಹದ ಮುಂದೆ: ಓ ದೇವಗಣ ಸಮೂಹವೆ ! ಈ ಡೋವಿಗೆಯ ಮೇಲೆ ಇಂಥ ವಿಚಿತ್ರ ಬರಹವೇಕೆ ? ಸತ್ತ ಮೇಲೆ ಕಿಂಚಿತ್ತು ಪುಣ್ಯವೆಂದು ಬರೆದ ಬರಹ ವಿಚಿತ್ರವಾಗಿದೆಯಲ್ಲ, ಇದು ಸತ್ತಿದೆ; ಸತ್ತುದಕ್ಕೆ ಕಿಂಚಿತ್ತು ಪುಣ್ಯವಾವುದು ಎಂದು ಪ್ರಶ್ನಿಸಿದ.

ಆಗ ದೇವಗಣವು ಅಯ್ಯ ನಾರದ ಮುನಿಯೆ, ನೀನೆ ನಿನ್ನೊಳಗೆ ವಿಚಾರ ಮಾಡು ಅಂದಲ್ಲಿ ನಿನಗೆ ಇದು ಸತ್ತ ಮೇಲೆ ಇದಕ್ಕಾದ ಪೂಣ್ಯ ಯಾವುದು ಎಂಬುದು ನಿನಗೆ ಗೋಚರವಾಗುವುದು.

ಓ ನಾರದ ಮಹರ್ಷಿಗಳೆ ! ನೀನೊಬ್ಬ ದೇವ, ಭಕ್ತರುಗಳಲ್ಲಿ ಅಗ್ರಗಣ್ಯ ಭಕ್ತ. ಇಂತಪ್ಪ ಶ್ರೇಷ್ಠ ಭಕ್ತರ ದೃಷ್ಟಿಗೆ ಬಿದ್ದುದು ಈ ಡೋವಿಯ ಪುಣ್ಯವಲ್ಲವೆ ! ಅದನ್ನು ನೀವೆ ಕೈಯಲ್ಲಿ ಹಿಡಿದು ಜೋಳಿಗೆಯಲ್ಲಿ ಹಾಕಿಕೊಂಡು ಕೈಲಾಸಕ್ಕೆ ತಂದುದು ಒಂದು ವಿಶೇಷ ಪುಣ್ಯ. ಇದನ್ನು ಗಣಸಮೂಹ ನೋಡಿದುದು ಮಹಾನ್ ಪುಣ್ಯವು. ಇದನ್ನು ''ನಿನ್ನೊಳಗೆ ನೀನೆ ವಿಚಾರಿಸಿಕೊ'' ಎಂದು ಹೇಳಿದ ವಿಷಯ ಪುರಾಣಗಳಲ್ಲಿ ಬಂದಿದೆ. ಈ ವಿಷಯ ನಂಬಿ ನಿಜವಾದುದನ್ನು ತಿಳಿಯದಂತಾಗಿದೆ. ನಿಜವಾದುದು ತಿಳಿದವರು ಬಸವಾದಿ ಪ್ರಮ

ಥರು. ಶರಣ-ಶರಣೆಯರು. ಅವರ ದಿವ್ಯ ದೃಷ್ಟಿಗೆ ಸಟೆಯು ಕಂಡುದಿಲ್ಲ ದಿಟವ ಕಂಡರು. ಇದು ಕಾರಣ ನೀಲಾಂಬಿಕೆ ಸಟೆಯ ಕಾಣದ ಶಕ್ತಿ ದಿಟವ ಕಂಡ ಮಹಾನ್ ಶಕ್ತಿಯಾದುದರಿಂದ ಅಮೃತ ಡೋವಿಗೆಯೊಳಗೆ ಅಮೃತ ಡೋವಿಗೆ ಪ್ರಸಾದದ ಕುರುಹಿಲ್ಲ ಬಸವಗೆ ಎಂದು ಬಸವರಸರ ಘನ ಗಂಭೀರವಾಗಿಹ ಜ್ಞಾನಾಮೃತದಿರುವ ಸೂಚಿಸಿಹಳು.

**ಪ್ರಸಾದ ಎರಡುಂಟು:** ಒಂದು ಕುರುಹಾಗಿ ಕಾಣಿಸುವ ಪ್ರಸಾದ. ಇನ್ನೊಂದು ಪ್ರಸಾದಕ್ಕೆ ಕುರುಹಿಲ್ಲ, ಕುರುಹಿಲ್ಲದ ಜ್ಞಾನ ಪ್ರಸಾದ ಶರಣ-ಶರಣೆಯರದು. ಇದು ಅರುವಿನ ಪರಿಮಳವಾಗಿಹ ಅರುವಿಂಗರುವು. ಇದು ಕಡೆ ಮೊದಲಿಲ್ಲದ ಪ್ರಸಾದ. ತೆರಹಿಲ್ಲದ ಲಿಂಗಭರಿತವಾಗಿಹ ಜ್ಞಾನಾಮೃತ ಪ್ರಸಾದ. ಇದು ಅನಿಯಮ ಬೆಡಗುಳ್ಳ ಪ್ರಸಾದ. ಇದಕ್ಕೆ ಕುರುಹಿಲ್ಲ, ಇದು ಮಹಾಕಾಲದಲ್ಲಿ ನಿಮ್ಮಿಂದ ನೀವೆ ಆಗಿರ್ದ ಪ್ರಸಾದ. ಮಹವು ಮಹದಾನಂದದ ಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದ ಪ್ರಸಾದ. ಇದು ವಿಪರೀತ ಚಾರಿತ್ರವಾದುದರಿಂದ ಕುರುಹಿಲ್ಲ ಬಸವಗೆ ಎಂದು ಹೇಳಿಹಳು.

ಅಮೃತ ಡೋವಿಗೆಯೊಳಗೆ ಅಮೃತಡೋವಿಗೆ : ಇದು ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ, ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು. ಇದು ಕುರುಹಿಲ್ಲದ ದೇಹಿಗೆ ದೇಹಿಯಾಗಿಹ ಅಮೃತಡೋವಿಯ ಘನವನೇನೆಂಬೆ. ಎರಡೊಂದಾದ ಜ್ಞಾನಾಮೃತ ಡೋವಿಯ ಘನವನೇನೆಂಬೆನಯ್ಯ. ಇವೆರಡರ ನಿಲುವು ಅಪೂರ್ವ.

ಇಂತಪ್ಪ ಅಪೂರ್ವ ಸಂಬಂಧ ಅಮೃತ ಡೋವಿಗೆಯೊಳಗೆ ಅಮೃತ ಡೋವಿಗೆ ಪ್ರಸಾದದ ಕುರುಹಿಲ್ಲ ಬಸವಂಗೆ ಎಂದು ಬಸವರಸರ ಮಹಾಘನದಿರುವುಳ್ಳ ನಿಸ್ಸೀಮತ್ವವ ಕೊಂಡಾಡುತ್ತಿಹಳು.

ಪ್ರಸಾದವದು ಶುದ್ಧ, ಪ್ರಸಾದವದು ಸಿದ್ಧ, ಪ್ರಸಾದವದು ಪ್ರಸಿದ್ಧ. ಇಂತಪ್ಪ ಮೂರೊಂದಾದ ಮಹಾ ಪ್ರಸಾದದ ಪರಿಣಾಮ ಕಂಡವರು. ಕುರುಹು ಶಬ್ದ ನಷ್ಟವಾಗಿ ಕಂಡುದು ಶುದ್ಧಪ್ರಸಾದ. ಮನ ನಷ್ಟವಾಗಿ ಕಂಡುದು ಸಿದ್ಧ ಪ್ರಸಾದ. ಭಾವ ನಷ್ಟವಾಗಿ ಕಂಡುದು ಭರಿತ ಪ್ರಸಾದ. ಇಂತಪ್ಪ ತ್ರಿವಿಧ ಪ್ರಸಾದವನೊಂದು ಮಾಡಿದ ಪರಿ. ಇದು ಅರಿವ ಅರುಹಿಸಿಕೊಂಬ ಈ ಉಭಯ ನಷ್ಟ ಮಾಡಿ ಕಂಡುದು ಮಹಾಪ್ರಸಾದವದು. ಅಮೃತ ಡೋವಿಗೆಯೊಳಗೆ ಅಮೃತಡೋವಿಗೆ ಕರುಣಿಸಿದ ಜ್ಞಾನಾಮೃತ ಪರಮಾಮೃತ ಪರಿಣಾಮಾನುಭಾವವಾದ್ದರಿಂದ ಪ್ರಸಾದದ ಕುರುಹಿಲ್ಲ ಬಸವಗೆ ಎಂದು ಸ್ತುತಿಸಿಹಳು.

***ಆ ಪ್ರಸಾದಕ್ಕೆ ರೂಹಿಲ್ಲದ ಮೂರ್ತಿಯ ಕಂಡು ಸಂಗಯ್ಯನಲ್ಲಿ ನಿಜಸುಖಿಯಾದ ಬಸವ :***

ಪ್ರಸಾದವದು ಪರಮಜ್ಞಾನ. ದೇಹಿಗೆ ದೇಹಿಯಾದ ರಹಸ್ಯವ ತಿಳಿದುದು ಪ್ರಸಾದವಾಗಿದೆ. ಅರುವೆನ್ನದ ಅರುವ ತಿಳಿಯುವುದೆ ಪ್ರಸಾದವಾಗಿದೆ. ತಾನು ಅರುವಿಂಗರುವಾದುದರಿಂದ ಆ ಪ್ರಸಾದಕ್ಕೆ ರೂಹಿಲ್ಲದ ಮೂರ್ತಿ ಕಂಡು ನಿಜ ಸುಖಿಯಾದ ಬಸವ. ಪ್ರಸಾದ ರೂಪಿ ಪರಮಜ್ಞಾನ, ಅದು ಸತ್ಯದ ಸತ್ಯವಾದುದರಿಂದ ಅಭೇದ್ಯ ಸತ್ಯವು. ಚಿತ್ತದ ಚಿತ್ ಆದುದರಿಂದ ನುಡಿಗೆಡೆಗೊಡದ ಚಿತ್ ಆಗಿರುವುದರಿಂದ ಅದು ಅಭೇದ್ಯ ಚಿತ್. ಅದು ಪರಮಾಮೃತಕ್ಕೆ ರೂಹಿಲ್ಲದ ಮೂರ್ತಿಯ ಕಂಡು ತೆರಹಿಲ್ಲದ ಘನವಾಗಿಹ ಸ್ವಸ್ವರೂಪಿ ಸಂಗಯ್ಯನಲ್ಲಿ ನಿಜಸುಖಿಯಾದ ಬಸವನೆಂದು ಹೇಳಿಹಳು.

# ಶಬ್ದ ಮುಗ್ಧವಾದುದೇ ಅರಿಯದ ಶಬ್ದ

**ಅರಿಯದ ಶಬ್ದವ ಕುರುಹಿಂಗೆ ತಂದ ಬಸವಯ್ಯನು.**
**ಆ ಕುರುಹನೆರಡ ಮಾಡಿದ ಬಸವಯ್ಯನು. ಆ ಎರಡ ಒಂದರಲ್ಲಿ ವೇಧಿಸಿ**
**ಸಂಗಯ್ಯನಲ್ಲಿ ಸ್ವಯ ಲಿಂಗಿಯಾದಯ್ಯ ಬಸವಯ್ಯನು.**

**ತಾತ್ಪರ್ಯ : *ಅರಿಯದ ಶಬ್ದವ ಕುರುಹಿಂಗೆ ತಂದ ಬಸವಯ್ಯನು* :**
ಶಬ್ದದ ರಹಸ್ಯವರಿತಾತ ಬಸವಯ್ಯನು. ಒಂದು ಶಬ್ದ, ಅರಿಸಿಕೊಳ್ಳುವ ಶಬ್ದವಾಗಿದೆ; ಒಂದು ಅರಿಯುವ ಶಬ್ದವಾಗಿದೆ. ನಾಮರೂಪಾಗಿ ತಿಳಿಸಿಕೊಳ್ಳುವುದು ಒಂದು ಶಬ್ದ; ದೃಕ್ ರೂಪಾಗಿ ತಿಳಿಯುವುದು ಒಂದು ಶಬ್ದವಾಗಿದೆ. ಇವೆರಡು ಆವುದರಿಂದ ಸಿದ್ಧವಾಗುತ್ತದೆ ಅದು ಅರಿಯದ ಶಬ್ದವಾಗಿದೆ. ನಿತ್ಯ ಅನಿತ್ಯವೆಂಬೆರಡು ಆವುದರಿಂದ ಸಿದ್ಧವಾಗುವುವು ಅದು ಅರಿಯದ ಶಬ್ದವಾಗಿದೆ. ಅಂಗ ಲಿಂಗವೆಂಬೆರಡು ಆವುದರಿಂದ ಸಿದ್ಧವಾಗುವವು ಅದು ಅರಿಯದ ಶಬ್ದವಾಗಿದೆ. ಜಡ-ಅಜಡ, ಜೀವ-ಶಿವ, ಮರವು-ಅರುವು, ಪರಪ್ರಕಾಶ-ಸ್ವಪ್ರಕಾಶ, ನಾಶ-ಅವಿನಾಶ ಎಂಬೆರಡು ಆವುದರಿಂದ ಸಿದ್ಧವಾಗುವವು ಅದು ಅರಿಯದ ಶಬ್ದವು. ಇಂತಪ್ಪ ಅರಿಯದ ಶಬ್ದವ ಕುರುಹಿಂಗೆ ತಂದ ಬಸವಯ್ಯನು. ಅರಿಯದ ಶಬ್ಧ, ಶಬ್ದವನ್ನೆ ಅರಿಯದುದನ್ನು ಕುರುಹಿಂಗೆ ತಂದನೆ ? ಕುರುಹು ಇದಾವ ಕುರುಹು ? ಇದು ಪೂಜಾ ಲಿಂಗವ ಮಾಡಿದ, ಇತ್ತ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗವ ಮಾಡಿದ.

''ಲಿಂಗಾರ್ಚನೆ ಮಾಡುವೆನಯ್ಯ ಜಂಗಮ ಮನೆಗೆ ಬರಬೇಕೆಂದು, ಲಿಂಗಾರ್ಚನೆಯಲ್ಲಿ ಫಲವುಂಟು ಪದವುಂಟು ಭವವುಂಟು. ಜಂಗಮಾರ್ಚನೆಯಲ್ಲಿ ಫಲಂನಾಸ್ತಿ, ಪದಂನಾಸ್ತಿ, ಭವಂನಾಸ್ತಿ, ಇದು ಕಾರಣ ಜಂಗಮಾರ್ಚನೆಯೆ ಲೇಸು ಕೂಡಲಸಂಗಮದೇವಾ'' ಆ ಕುರುಹನ್ನೆ ಪೂಜಾಲಿಂಗವ ಮಾಡಿದ. ಇತ್ತ ''ರೂಪವನೆ ಕಂಡು ನಿರೂಪನೆ ಕಾಣರು. ತನುವನೆ ಕಂಡು ಅನುವನೆ ಕಾಣರು. ಆಚಾರವನೆ ಕಂಡು ವಿಚಾರವನೆ ಕಾಣರು ಗುಹೇಶ್ವರಾ ನಿಮ್ಮ ಕಂಡು ಕೂಡಲರಿಯದೆ ಕೆಟ್ಟರು ಬಸವರಸರು''.

***ಆ ಕುರುಹನೆರಡು ಮಾಡಿದ ಬಸವಯ್ಯನು*** : ಆವುದು ಅರಿಯಬಾರದ ಘನ ಅದನ್ನೆ ಕುರುಹಿಂಗೆ ತಂದನೆ ? ತಂದುದನ್ನೆ ಎರಡು ಮಾಡಿಹನೆ ? ಇದೆಂಥ ಮಹದಾಟ ! ರೂಪ ಮಾಡಿದ ಆಟ. ಇತ್ತ ನಿರೂಪ ಮಾಡಿದ ಆಟ. ಇದು ಬಸವಯ್ಯನ ಮಹದಾಟ. ರೂಪು ನಿರೂಪವೆಂಬೆರಡು ಮಾಡಿದರೂ ತಾನು ಅರಿಯದಂತಿದ್ದುದರಿಂದ ಅರಿಯದ ಶಬ್ದ. ಇದು ಘನ ಗಂಭೀರವಾದುದು, ಮಹಾಘನವಾದುದು.ಮಹಾಘನವನ್ನೆ ಕುರುಹಿಂಗೆ ತಂದನೆ ? ಇಂತಪ್ಪ ಮಹಾನ್ ಶರಣ ಬಸವಯ್ಯನ ಸಾಹಸ ಅಭೇದ್ಯವ ಭೇದಿಸಲು ಬಂದ ಸಾಹಸ, ಅಪ್ರತಿಮ ಸಾಹಸ. ಅರಿಯದ ಶಬ್ದ ಇದು ''ಓದಿದ ವೇದದಲ್ಲೇನಹುದಯ್ಯ, ಓದಿಸಬಾರದಂಥ ಲಿಂಗಸ್ಥಲವಾದುದರಿಂದ ನಾಲ್ಕು ವೇದಗಳಲ್ಲಿಯೂ ಸಿಗದ ಶಬ್ದ''. ಇದು ವೇದ ವೇದಾಂತಗಳಿಗೂ ಅಸಾಧ್ಯವಾದ ಅನುಪಮ ಲಿಂಗವಾದ್ದರಿಂದ ಹದಿನಾರು ಶಾಸ್ತ್ರಂಗಳಲ್ಲಿಯೂ ಸಿಗದ ಶಬ್ದ, ಹದಿನೆಂಟು ಪುರಾಣಂಗಳಲ್ಲಿಯೂ ಸಿಗದ ಶಬ್ದ, ಇಪ್ಪತ್ತೆಂಟು ದಿವ್ಯಾಗಮಂಗ

ಳಲ್ಲಿಯೂ ಸಿಗದ ಶಬ್ದ. ಇತ್ತ ಮೂವತ್ತೆರಡು ಉಪನಿಷತ್ತುಗಳಲ್ಲಿಯೂ ಸಿಗದ ಶಬ್ದ. ಏಳು ಕೋಟಿ ಮಂತ್ರಗಳಲ್ಲಿಯೂ ಸಿಗದ ಶಬ್ದ, ಅನೇಕ ಮಂತ್ರ ಅನೇಕ ಶಬ್ದ, ಅನೇಕ ಶಾಸ್ತ್ರ ಅನೇಕ ವ್ಯಾಕರಣಗಳಲ್ಲಿಯೂ ಸಿಗದ ಶಬ್ದ. ಶಬ್ದ ಮಾಡದೆ ಶಬ್ದಮುಗ್ಧವಾದುದರಿಂದ ಅರಿಯದ ಶಬ್ದ ಕುರುಹಿಂಗೆ ತಂದ ಬಸವಯ್ಯನು.

ಮಾತಿಲ್ಲದವನನ್ನು ಮಾಂತಿಗೆ ತಂದನೆ ? ಇದು ಕಾರಣ ಪ್ರಭುದೇವ "ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಟ್ಟು, ಹೆಸರಿಟ್ಟು ಕರೆದವರಾರು ? ಅಕಟಕಟಾ ಶಬ್ದದ ಲಜ್ಜೆಯ ನೋಡಾ, ಗುಹೇಶ್ವರ ನರಿಯದವಂಗೆ ತರಕಟವಾಗಿ ಕಾಡಿತ್ತು ಮಾಯೆ". ನಿರಾಳವೆಂಬ ಕೂಸು, ಏನೊಂದೂ ಅರಿಯದ ಕೂಸು. ಈ ಕೂಸನ್ನೆ ಕುರುಹಿಂಗೆ ತಂದು ಅದಕ್ಕೆ ಆತ್ಮಾ ಅಸಂಗ ಸ್ವಯಂಪ್ರಕಾಶ ಕೂಟಸ್ಥ ಪರಬ್ರಹ್ಮ ಪರಮಾತ್ಮ ಸಚ್ಚಿದಾನಂದ ಲಿಂಗ ಎಂದು ಸವಿ ಸವಿಯಾಗಿ ಬಹು ಮೃದುವಾಣಿಯಿಂದ ಹೆಸರಿಟ್ಟು ಕರೆದವರಾರು ? ಇದು ಅರಿಯಬಾರದ ಘನ. ಇಂತಪ್ಪ ಅಪರಮಿತ ನಿಲುವುಳ್ಳ ಅರಿಯದ ಶಬ್ದ. ಅದನ್ನು ಶಬ್ದದಲ್ಲಿ ತಂದು ಬಳಸುವುದೆಂದರೆ ಅಕಟಕಟಾ, ಏನು ಅಸಂಬಂಧ ನಡತೆ, ಏನು ಅಸಂಬಂಧ ನುಡಿ, ಬಳಸಬಾರದ್ದಲ್ಲಿ ಬಳಸುವದೆಂದರೆ ನಾಚಿಕೆ ಬೇಡವೆ ? ಇವರೆಲ್ಲರು ಗುಹೇಶ್ವರ ನರಿಯದವರು. ಇವರ ಶಬ್ದ ಇವರಿಗೆ ವೈರಿಯಾಗಿ ಕಾಡುವವು. ಇದನ್ನು ತಿಳಿಯರಲ್ಲ, ಇವರ ಶಬ್ದ, ಇವರಿಗೆ ವೈರಿಯಾಗಿ ಕಾಡಿತ್ತೆ, ಇದೆಂಥ ಮಾಯೆ ?

***ಆ ಎರಡ ಒಂದರಲ್ಲಿ ವೇಧಿಸಿ ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವಯ್ಯನು :*** ಪೂಜಾಲಿಂಗ, ಅಚಲಿತ ಲಿಂಗ, ಅಖಂಡಿತ ಲಿಂಗ, ಅನುಪಮ ಲಿಂಗವೆಂಬ ಗುರುಕಾರುಣ್ಯದಿಂದ ಕರಸ್ಥಲಕ್ಕೆ ಬಂದುದನ್ನು ಸಮಸ್ವರೂಪವಾಗಿಹ ಸ್ವಯಲಿಂಗದಲ್ಲಿ ಒಂದು ಮಾಡಿದ ಘನವಂತ. ಈ ಮಹಾಂತನ ದಿವ್ಯದೃಷ್ಟಿಗೆ "ಆಚಾರ ಅನಾಚಾರವಾಯಿತ್ತು. ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯ ತಪ್ಪಿ ಲಿಂಗ ಸಂಚಯವಾಯಿತ್ತು. ಎಲ್ಲಿ ರೂಪಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಶಬ್ದವಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಸೋಂಕಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಗಂಧವಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರಸವಲ್ಲಿಯೆ ಲಿಂಗಸ್ವಾಯತವಾಯಿತ್ತು ಕೂಡಲ ಸಂಗಮದೇವಾ ಕರುಣಾರಸಾಬ್ಧಿ ಕಡಕೋಡ ಒಡಿಯಿತ್ತಯ್ಯ ಎನ್ನ ಮೇಲೆ" ಬಸವರಸರು ಆ ಎರಡ ಒಂದರಲ್ಲಿ ವೇಧಿಸಿದುದು ಹೇಗೆ ? ಅರುಹಿಸಿಕೊಂಬ ಪೂಜಾಲಿಂಗವಾಗಲಿ, ಇತ್ತ ಬಾರಾ ಜ್ಯೋತಿರ್ಲಿಂಗಗಳಾಗಲಿ, ಇದಲ್ಲದೆ ಅರಿವ ಲಕ್ಷಣವುಳ್ಳ ಬೆಳಗುವ ಲಿಂಗವಾಗಲಿ, ಇವೆರಡನ್ನು ಅರಿಯಬಾರದ ಘನವಾಗಿಹ ತನ್ನಿರುವಿನಲ್ಲಿ ಒಂದು ಮಾಡಿದ. ಶಬ್ದಕ್ಕೆ ಅವಕಾಶವಿಲ್ಲದಂತೆ ತನ್ನನ್ನೆ ಕಂಡುದು ವೇದ್ಯವಾಗಿ, ಪೂರ್ವದಲ್ಲಿ ಮಾಡಿದ ಆಚಾರ ಅನಾಚಾರವಾಯಿತ್ತು ನೋಡಾ. ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನಲ್ಲಿ ಕಂಡು, ತಾನಾದುದು ಕಂಡು, ಇದು ಪೂಜಾಲಿಂಗ, ಇದು ಗುರು ಕರುಣಿಸಿದ ಇಷ್ಟಲಿಂಗವೆಂಬ ಸೀಮೆ ನಷ್ಟವಾಗಿ, ನಿಸ್ಸೀಮವಾಗಿಹ ತನ್ನಿರುವೆ ತಾನೆ ಸ್ವಯಲಿಂಗವಾಯಿತ್ತು. ಪ್ರಾಣವೆಂಬ ಸೀಮೆಯೆ ನಷ್ಟವಾಗಿ, ಪ್ರಾಣಲಿಂಗವಾಗಿಹ ತನ್ನಿರುವೆ ಸಿದ್ಧವಾಗಿ ಸ್ವಯಂಜ್ಯೋತಿ ಲಿಂಗ ತಾನೆಂಬುದು ಸಿದ್ಧವಾಗಿ ನಿಸ್ಸೀಮತ್ವವೆ ಸಿದ್ಧವಾಯಿತ್ತು. ಎಲ್ಲಿ ರೂಪಲ್ಲಿಯೆ ತಾನು, ಎಲ್ಲಿ ಶಬ್ದವಲ್ಲಿಯೆ ತಾನೆ ಲಿಂಗ, ಎಲ್ಲಿ ಸೋಂಕಲ್ಲಿಯೆ ತಾನು. ಎಲ್ಲಿ ಗಂಧವಲ್ಲಿಯೆ ತಾನು. ಎಲ್ಲಿ ರಸವಲ್ಲಿಯೆ ತಾನೆ ತಾನೆಂಬುದು ಲಿಂಗಕ್ಕೆ ಲಿಂಗ

ವಾಗಿಹ ಅಖಂಡಿತನ ನಿಲುವು ತನ್ನದು. ಆದುದರಿಂದ ಅರಿವ ಅರುಹಿಸಿಕೊಂಬ ಈ ಎರಡ ಒಂದರಲ್ಲಿ ಅಂದರೆ ಅರಿಯಬಾರದ ಘನದಲ್ಲಿ ಒಂದು ಮಾಡಿ ಸಂಗಯ್ಯನಲ್ಲಿ, ಸ್ವಯಲಿಂಗಿಯಾದ ಬಸವಯ್ಯನು ಎಂದು ಹೇಳಿಹಳು. ★

## ಕಾಯದ ಅರಿವು ತಿಳಿಯಲು ಕಾಯಬೇಕು

**ಅರುವೆರಳುದ್ದದ ದೇಹವ ಮಾಡಿದೆ ಕರುಣಿ ಬಸವಾ,**
**ಬೆರಸಿ ಬೇರಿಲ್ಲದೆ ಇದ್ದೆ ಬಸವಾ, ನೆರೆನಂಬಿದೆ ನಿಮ್ಮನ ಬಸವಾ,**
**ಬರಿ ಕಾಯದ ಭ್ರಮೆಯ ಬಿಡಿಸಿದೆಯಲ್ಲ ಬಸವಾ.**
**ಅರುವೆರಳುದ್ದದ ದೇಹವ ಮಾಡಿದೆ ಕರುಣಿ ಬಸವಾ,**
**ನೀನು ತೃಪ್ತನಾಗಿ, ನಾನು ತೃಪ್ತಳಲ್ಲ ಬಸವಾ,**
**ಸಂಗನ ಬಸವಾ ಮೂಲ ಕರ್ತೃ ನೀನು ಎನಗೆ.**

**ತಾತ್ಪರ್ಯ : ಅರುವೆರಳುದ್ದದ ದೇಹವ ಮಾಡಿದೆ, ಕರುಣಿ ಬಸವಾ :**

ಬಸವ ದೇವ, ನೀನು ಮಹಾಕರುಣಿ ಬಸವಾ, ನಿನ್ನ ಮಹತ್ಕೃಪೆ ಅದಾರಿಗೆ ? ನೀನು ಸಕಲರ ಕರುಣಿ ಬಸವ, ಶರಣ ಶರಣೆಯರ ಕರುಣಾಂಬುಧಿಯಾದುದರಿಂದ ಮಾಂಸ ಪಿಂಡವ ಕರಗಿಸಿ ಮಂತ್ರ ಪಿಂಡವ ಮಾಡಿದೆ, ಕರುಣಿ ಬಸವಾ, ಪಂಚಭೂತ ಎನಲೊಲ್ಲದೆ, ಪ್ರಸಾದ ಕಾಯವ ಮಾಡಿ ತೋರಿದೆ ಕರುಣಿ ಬಸವಾ, ಪಂಚಪ್ರಾಣ ಎನಲೊಲ್ಲದೆ, ಪ್ರಾಣಲಿಂಗವೆಂದು ತೋರಿದೆ ಬಸವಾ, ನಿನ್ನ ಕರುಣೆ ಅಪಾರ ಬಸವಾ.

ಅರುವೆರಳುದ್ದದ ದೇಹವ ಮಾಡಿದ ಕರುಣೆಗೆ ಏನನ್ನಬೇಕು? ಓಹೊ ! ದೇಹವನ್ನೆ ಅರುವೆರಳುದ್ದದ ದೇಹವ ಮಾಡಿದೆಯಾ! ಓಹೋ ನಿನ್ನದು ಅಖಂಡ ದೃಷ್ಟಿ, ಅಖಂಡ ಜ್ಞಾನ, ಅಖಂಡ ಭಾವ ಈ ಭರಿತ ಭಾವದ ಕರುಣೆಗೆ ಏನನ್ನಬೇಕು. ನಿನ್ನಲ್ಲಿ ಸೀಮಿತ ದೃಷ್ಟಿ, ಸೀಮಿತ ಭಾವ, ಸೀಮಿತ ಜ್ಞಾನ ಕಾಣುವುದಿಲ್ಲವಲ್ಲ, ನಿನ್ನ ನಿಸ್ಸೀಮತ್ವ ಅದಾರಿಗೆ ?

ನೀನು ದೇಹ ಎಂಬುದು ಕಾಣಲಿಲ್ಲ, ದೇಹಿ ಎಂಬುದು ಕಾಣಲಿಲ್ಲ, ನಾಶ ಎಂಬುದು ಕಾಣಲಿಲ್ಲ, ಅವಿನಾಶಿ ಎಂಬುದು ಕಾಣಲಿಲ್ಲ, ಇದು ಸತ್ಯವೆಂದು ತೋರಲಿಲ್ಲ, ಅಸತ್ಯವೆಂದು ತೋರಲಿಲ್ಲ, ತೋರಬಾರದ ಘನವನ್ನೇ ತೋರಿಸಿ ಹೇಳದಾದೆಯಾ ! ಹೇಳಬಾರದ ಘನವನ್ನೇ ತೋರಿ, ಶಬ್ದ ಮುಗ್ಧನಾದೆಯಾ ! ನೀನು ಅರುವೆರಳುದ್ದದ ದೇಹ ಮಾಡಿದುದು ಅದಾರಿಗೆ ಸಾಧ್ಯ. ಇದು ನಿತ್ಯ, ಇದು ಅನಿತ್ಯ, ಇದು ಜಡ, ಇದು ಅಜಡ ವಿಭಾಗಿಸಿ ಹೇಳುವರುಂಟು, ತಿಳಿಸುವುದು ಉಂಟು, ತಿಳಿಯುವವರು ಉಂಟು. ವಿಭಾಗ ದೃಷ್ಟಿಯ ಕೆಡಿಸಿ ನಷ್ಟವ ಮಾಡಿ ಅಖಂಡನ ನಿಲುವು ಕರುಣಿಸಿದವರುಂಟೆ ? ಶಬ್ದವ ನಷ್ಟ ಮಾಡಿ ನಿಶಬ್ದ ವೇದದ ರಹಸ್ಯವ ಕರುಣಿಸಿದವರುಂಟೆ ? ರೂಪವ ಕೆಡಿಸಿ, ನಿರೂಪನ ತೋರಿದವರುಂಟೆ ? ತನುವ ಕೆಡಿಸಿ ಅನುವ ತೋರಿದವರುಂಟೆ ? ನೆನಹು ನಿರ್ಣಯ ಕೆಡಿಸಿ, ನಿಜದಿರುವ ತೋರಿದವರುಂಟೆ ? ಇಂತಪ್ಪ ಅಪ್ರತಿಮ ಕಾರ್ಯ ಮಹವು ಮಹದಾನಂದದಲಕ್ಕಾಡಿದ ಕಾರ್ಯ ಬಸವಾ, ನಿನ್ನ ಸಾಹಸ ಆರಾರಿಗೆಯೂ ಆಗದ ಸಾಹಸ. ಅರುವೆರಳುದ್ದದ ದೇಹವ ಮಾಡಿದುದು.

ಇದು ಅರುವಿನ ಸೃಷ್ಟಿ, ಜಡ ಸೃಷ್ಟಿ ಇದಲ್ಲ ಉಪಾಧಿ ಕಾರ್ಯವನ್ನೆ ನೋಡದ ದಿವ್ಯ

ದೃಷ್ಟಿ ಅರುವೆರಳುದ್ದದ ದೇಹವ ಮಾಡಿದುದು ಸಾಮಾನ್ಯರ ಕಾರ್ಯವಲ್ಲ. ಅಸಾಮಾನ್ಯರ ಸೃಷ್ಟಿ ಕಾರ್ಯ. ನಾಮರೂಪವಾಗಿ ತೋರುವ ಸೃಷ್ಟಿಯನ್ನೆ ಕಾಸಿದ ಕರಗಿಸಿದ, ನಿರ್ನಾಮವಾಗಿಹ ಘನದಿರುವಿನ ಬಣ್ಣವಿಟ್ಟು ತೋರಿದ, ಈ ಮಹಾನ್ ಕಾರ್ಯ ಮಾಡುವುದು ಅದಾರಿಗೆ ಸಾಧ್ಯ ? ಅಸಾಧ್ಯವ ಸಾಧಿಸಿದ. ಭೇದ್ಯವ ಕೆಡಿಸಿ ಅಭೇದ್ಯವ ತೋರಿದ ಸ್ವಾವಲಂಬವ ಕೆಡಿಸಿ ನಿರಾಲಂಬದಿರುವ ತೋರಿದ ಕರುಣಿ ಬಸವಾ.

***ಬೆರಸಿ ಬೇರಿಲ್ಲದೆ ಇದ್ದೆ ಬಸವಾ :***

ಬಸವರಸಾ ನಿನ್ನ ಕರುಣೆಯಿಂದ ಅರುವೆರಳುದ್ದದ ದೇಹದಲ್ಲಿ ಬೆರಸಿ ಬೇರಿಲ್ಲದೆ ಇದ್ದೆ ಬಸವಾ. ಓಹೊ ! ಅರುವೆರಳುದ್ದದ ದೇಹ. ಇದು ಅರುವೆನ್ನದ ಅರುವಾಗಿದ್ದವರ ಅರುವೆರಳುದ್ದದ ದೇಹ, ಶಬ್ದಮುಗ್ಧರಾಗಿ ನೋಡಿದವರ ದೇಹ, ಮಾತಿಲ್ಲದವನ ದೇಹ, ''ಮಾತಿಲ್ಲದವನ ಕೂಡ ಮಾತನಾಡ ಹೋಗಿ, ತನ್ನ ಮಾತಿನ ಹಂಗ ಹರಿದು, ಮಾತಿಲ್ಲದವನಲ್ಲಿ ಲೀಯವಾದಲ್ಲಿ'' ಅರುವೆರಳುದ್ದದ ದೇಹವ ಕಂಡ ಕೃಪೆ, ಬಸವ ಕೃಪೆ. ಇಂತಪ್ಪ ರಹಸ್ಯವರಿತಲ್ಲಿ ಅರುವೆರಳುದ್ದದ ದೇಹದಲ್ಲಿ ಬೆರಸಲು ಬಂದುದು. ಇದಲ್ಲದೆ ಬೇರಿಲ್ಲದಂತೆ ಇದ್ದುದು ನಿನ್ನಯ ಮಹತ್ಕೃಪೆ.

ಇಂತಪ್ಪ ಮಹತ್ಕೃಪೆ ಬೇರಿಲ್ಲದಂತೆ ಇದ್ದುದ ಕರುಣಿಸಿದ ಘನವ ನೇನೆಂಬೆ. ಅರಿಯಲಿಲ್ಲದ ಅರುವ ನರುಹಿಸಿದ ನಿನ್ನ ಕೃಪೆಗೆ ಏನನ್ನಬೇಕು ? ಅಂತಪ್ಪ ಅರಿಯಲಿಲ್ಲದ ಅರುವ ಅವಗ್ರಹಿಸಿ ಬೆರಸಿ ಬೇರಿಲ್ಲದೆ ಇದ್ದ ಬಸವಾ. ಏನೆಂಬೆನೇನೆಂಬೆ ಅರುವೆರಳುದ್ದದ ದೇಹವ ಮಾಡಿ ದೇಹವೆಂದರಿಯೆ, ದೇಹಿಯೆಂದರಿಯೆ, ಜಡವೆಂದರಿಯೆ, ಅಜಡವೆಂದರಿಯೆ, ನಾಶವೆಂದರಿಯೆ, ಅವಿನಾಶಿ ಎಂದರಿಯೆ, ಅರಿಯಬಾರದ ಘನವರಿತು ಬೆರಸಿ ಬೇರಿಲ್ಲದೆ ಇದ್ದೆ ಬಸವಾ ಎಂದು ಹೇಳಿಹಳು.

***ನೆರೆ ನಂಬಿದೆ ನಿಮ್ಮನ ಬಸವಾ :***

ಬಸವಯ್ಯ ಅರಿಯಲಿಲ್ಲದ ಅರುವ ನರುಹಿಸಿದುದು ಅರಿದು ಚೆನ್ನಾಗಿ ನಂಬಿದೆ ನಿಮ್ಮನ ಬಸವಾ. ನಿಮ್ಮನ ನಂಬುವುದು ಸಕಲರಿಗೆ ಸಾಧ್ಯವು ಅಹುದ; ಅಸಾಧ್ಯವು ಅಹುದು.

ಓ ಬಸವಯ್ಯ ನಿಮ್ಮನು ಒಲಿದು ಒಲಿಸಿಕೊಳ್ಳುವುದು ಒಲಿದಲ್ಲದೆ ಇಲ್ಲ. ''ಹಲವು ಕೊಂಬಿಗೆ ಹಾರದಿರು ಮರುಳೆ. ಅಟ್ಟಿ ನೋಡುವ, ತಟ್ಟಿ ನೋಡುವ, ಮುಟ್ಟಿ ನೋಡುವ, ಒತ್ತಿ ನೋಡುವ ಅಟ್ಟಿದಡೆ ಮುಟ್ಟಿದಡೆ ತಟ್ಟಿದಡೆ ಒತ್ತಿದಡೆ ನಿಷ್ಠೆ ಬಿಡದಿರ್ದಡೆ ತನ್ನನೀವ ಮಹಾಲಿಂಗ ಕಲ್ಲೇಶ್ವರಾ''

ಬಸವಯ್ಯ, ಗುರುವೆ ಅರಿಯಲಿಲ್ಲದ ಅರುವ ನರುಹಿಸಿದ ಶ್ರೀಗುರು ನೀನು, ಗುರುಲಿಂಗ ಗುರುವೆ ನೀನು ಮಹಾಕರುಣಿ ಬಸವಾ. ನಿನ್ನಂತೆ ಮಾಡಿಕೊಳ್ಳುವ ಕರುಣಾಕರ. ನೀನೆ ಒಲಿದು ಒಲಿಸಿಕೊಳ್ಳುವುದು. ನೀನು ಒಲಿದಲ್ಲದೆ, ಒಲಿಸಿಕೊಳ್ಳುವುದು ಅಸಾಧ್ಯವು. ನಿನ್ನ ನೆರೆ ನಂಬಿದವರು, ಅವರಲ್ಲಿ ನೀನು ನಿನ್ನಲ್ಲಿ ಅವರು, ಅರಿಯಲಿಲ್ಲದ ಅರುವಾಗಿಹ ತೆರಹಿಲ್ಲದ ಘನದಿರುವ ಕರುಣಿಸಲು ಅಟ್ಟುವ ತಟ್ಟುವ ಮುಟ್ಟುವ ಒತ್ತುವ ಮಹಾಭಾಗ್ಯ ಅದಾರಿಗೆ? ಆರಿಗೆ ಅದು ಒಪ್ಪಿಗೆಯಾಗಿದೆ, ಅವರೆ ಬೆರಸಿ ಬೇರಿಲ್ಲದಂತಿದ್ದ ಮಹಾಘನ ತನ್ನಿರುವು ಆಗುವುದು ಸನ್ನಿಹಿತವೆಂದು ತಿಳಿವುದು.

ಬಸವಯ್ಯ ನಿನ್ನಯ ಕರುಣೆಯಲ್ಲಿ ಬೆಳೆದವಳಾದುದರಿಂದ ನೀನು ಅಟ್ಟುವ ಅನುವ

ಕಂಡೆ, ತಟ್ಟುವ ಅನುವ ಕಂಡೆ, ಮುಟ್ಟುವ ಅನುವ ಕಂಡೆ, ಒತ್ತುವ ಅನುವ ಕಂಡೆ, ಕಂಡರಿದು ಘನಕ್ಕೆ ಘನವಾಗಿಹ ಅರಿಯಲಿಲ್ಲದ ಅರುವ ಬೆರಸಿ ಬೇರಿಲ್ಲದೆ ಇದ್ದೆ ಬಸವಾ ಎಂದು ಸ್ತುತಿಸಿಹಳು.

***ಬರು ಕಾಯದ ಭ್ರಮೆಯ ಬಿಡಿಸಿದೆಯಲ್ಲ ಬಸವಾ :***

ಬರು ಕಾಯದ ಭ್ರಮೆಯ ಬಿಡಿಸಲು "ಕಾಯದಿಂದ ಗುರುದರ್ಶನ. ಕಾಯದಿಂದ ಲಿಂಗ ದರ್ಶನ, ಕಾಯದಿಂದ ಜಂಗಮ ದರ್ಶನ, ಕಾಯದಿಂದ ನಿಮ್ಮವ ಕಂಡೆನ್ನ ಮರದೆ ಕೂಡಲಸಂಗಮದೇವಾ".

ಕಾಯದಿಂದಾಗುವ ಪರಮಲಾಭ ಭ್ರಮಾತ್ಮರಿಗೆ ತಿಳಿಯದು. ಕಾಯದ ಕಾಯ ತಿಳಿಯಲು ಕಾಯವೆ ಬೇಕು. ಪ್ರಾಣದ ಪ್ರಾಣ ತಿಳಿಯಲು ಕಾಯವೆ ಬೇಕು. ಮನದ ಮನ ತಿಳಿಯಲು ಮನವೆ ಬೇಕು. ಗುರು ಲಿಂಗ ಜಂಗಮ ಪ್ರಸಾದ ದರ್ಶನಕ್ಕೂ ಕಾಯವೆ ಬೇಕು. ಕಾಯದಿಂದ ಗುರುವಿಂಗೆ ಗುರುವಾಗಿಹ ಗುರು ಪ್ರಸಾದ ಕೊಂಡಾಗ, ಕಾಯ ಬರು ಕಾಯವಾಗದು. ಕಾಯವ ಪರತತ್ವದಿರುವ ತಿಳಿಯಲು ಉಪಯೋಗಿಸಿದಲ್ಲಿ ತಾನಾರೆಂಬ ತನ್ನ ಸ್ವರೂಪದ ಹಿರಿಮೆ ಗೊತ್ತಾಗಿರುವುದರಿಂದ ಆಗ ಬರು ಕಾಯದ ಭ್ರಮೆಯ ಬಿಡಿಸಿದೆಯಲ್ಲ ಬಸವಾ ಎಂದು ಹೇಳಿಹಳು.

***ನೀನು ತೃಪ್ತನಾಗಿ, ನಾನು ತೃಪ್ತಳಲ್ಲ ಬಸವಾ :***

ಎಲ್ಲಿ ಆನೆಂಬ ಅಹಂತ್ವವಿದೆ, ಅಲ್ಲಿ ಅತೃಪ್ತಿ ಇದೆ. ಎಲ್ಲಿ ದಾಸೋಹಂ ಭಾವವಿದೆ, ಅಲ್ಲಿ ಅಹಂತ್ವ ನಷ್ಟವಾಗಿಹುದು ಬಸವಯ್ಯ. ನೀನು ಚಿದಹಮ್ಮು ನಷ್ಟ ಮಾಡಿದ ಜ್ಞಾನ ದಾಸೋಹಿಯಾದುದರಿಂದ ನೀನು ತೃಪ್ತನು. ನಾ ನೀನೆಂಬುದು ಇನ್ನು ನನ್ನಲ್ಲಿ ಸೀಮಿತ ಭಾವ ವಿದ್ದುದರಿಂದ ನಾನು ತೃಪ್ತಳಲ್ಲ ಬಸವಾ ಎಂದು ಹೇಳಿಹಳು.

***ಸಂಗನ ಬಸವ ಮೂಲ ಕರ್ತೃ ನೀನು ಎನಗೆ :***

ಸಂಗಯ್ಯನಲ್ಲಿ ಸಮರಸವಾಗಿಹ ಸಂಗನಬಸವ. ತೆರಹಿಲ್ಲದ ಘನವಾಗಿಹ ಸಂಗಯ್ಯನರಿತ ಸಂಗನಬಸವ. ನನಗೆ ಮೂಲ ಗುರು ನೀನೆ. ಗುರುವಿಂಗೆ ಗುರುವಾಗಿಹ ಗುರುಲಿಂಗದು ದಯಕ್ಕೆ ನೀನೆ ಮೂಲ ಕರ್ತೃ ಎನಗೆ ಎಂದು ಕೊಂಡಾಡಿಹಳು.

# ಇಬ್ಬರ ಮಧ್ಯದಲ್ಲಿದ್ದ ವಸ್ತು ಒಂದೆ

**ಎನಗೆ ಲಿಂಗವು ನೀವೆ ಬಸವಯ್ಯ,**
**ಎನಗೆ ಸಂಗವು ನೀವೆ ಬಸವಯ್ಯ,**
**ಎನಗೆ ಪ್ರಾಣವು ನೀವೆ ಬಸವಯ್ಯ,**
**ಎನಗೆ ಪ್ರಸಾದವು ನೀವೆ ಬಸವಯ್ಯ,**
**ಎನಗೆ ಪ್ರಭೆಯ ಮೂರ್ತಿಯು ನೀವೆ ಬಸವಯ್ಯ,**
**ಎನಗೆ ಸಂಗಯ್ಯನು ನೀವೆ ಬಸವಯ್ಯ.**

**ತಾತ್ಪರ್ಯ : *ಎನಗೆ ಲಿಂಗವು ನೀವೆ ಬಸವಯ್ಯ :***

ಅದಾವ ಲಿಂಗವು ನೀವೆ ಬಸವಯ್ಯ ? ಇಬ್ಬರ ಮಧ್ಯದಲ್ಲಿದ್ದ ವಸ್ತು ನೀವೆ ಬಸವಯ್ಯ, ಗುರುವಿನ ಗುರುವಾಗಿಹ ಗುರುಲಿಂಗ ನೀವೆ ಬಸವಯ್ಯ. ಎನಗೆ ಪ್ರಥಮಾಚಾರ್ಯ ನೀವೆ ಬಸವ್ಯಯ. ನೀವು ಎನಗೆ ಎನ್ನ ಗುರುಲಿಂಗವಾಗಿಹ ಮಹದಿರುವ ಅದನೆಂತು ವರ್ಣಿಸುವುದು. ಎನ್ನ ಅಂತರಂಗ ಗುರುಲಿಂಗವಾಗಿ ಪ್ರಜ್ವಲಿಸುವ ಮಹದಿರುವ ನೋಡಿರೆ; ಅದು ಎರಡಿಲ್ಲದ ಘನ ಎಂಬೆನೆ ? ಎರಡೊಂದಾದ ವಸ್ತು. ವಿವರಿಸುವಡೆ ಗುರುವಾದುದಿಲ್ಲ, ಶಿಷ್ಯರಾದುದಿಲ್ಲ; ಎರಡಿಲ್ಲವಾದುದರಿಂದ ಮರವೆಂಬ ಬಹಿರಂಗವಿಲ್ಲ, ಅರುವೆಂಬ ಅಂತರಂಗವಿಲ್ಲ. ಇವೆರಡು ನಷ್ಟವಾದುದನೇನೆಂಬೆ. ನನ್ನ ಶಿಷ್ಯಳಾಗಿ ಕಂಡುದಿಲ್ಲ, ನಿಮ್ಮನ್ನು ಗುರುವಾಗಿ ಕಂಡುದಿಲ್ಲ, ಕಾಣದುದ ಕಂಡುದ ನೇನೆಂಬೆ. ಎರಡೆಂಬೆನೆ ಒಂದು; ಒಂದೆಂಬೆನೆ ವರ್ಣಾತೀತದ ಮಹದಾಟ. ಮಹವು ಮಹದಾನಂದದಲಕ್ಕಾಡಲು ಬಂದ ಸ್ವಯದಾಟ. ಸುಖದ ಸುಖವಾಗಿಹ ನಿಜದಿರುವಿನಲ್ಲಿ ನಿಂದ ಪರಮ ಶಾಂತನಾಟ. ಇದು ನಿರಾಳ ಕೂಸಿನ ಆಟ. ಹಸುಗೂಸಿನ ಆಟ, ಚಿನ್ಮಯದಾಟ, ನಿಮ್ಮ ಆಟ ನೀವೆ ಬಸವಯ್ಯ ಎಂದು ಹೇಳಿಹಳು.

***ಎನಗೆ ಸಂಗಯ್ಯ ನೀವೆ ಬಸವಯ್ಯ :***

ನಿರುಪಮನ ಸಂಗ ಅದನೆಂತು ವರ್ಣಿಸುವುದು. ಎನಗೆ ಸಂಗವು ನೀವಾದುದರಿಂದ ನಿಮ್ಮ ಸಂಗ ಕೂಡದಗಲದ ಸಂಗ. ಸಂಯೋಗ ವಿಯೋಗವೆಂಬೆರಡಿಲ್ಲದ ಸಂಗ. ನಿಮ್ಮದು ಕೂಡಿ ಬೆರಸದ ಸಂಗ. ಅಗಲಿ ಹಿಂಗದ ಸಂಗ. ಗಗನ ಸದೃಶವಾಗಿಹ ಜ್ಞಾನಾಮೃತದಿರುವಿನ ಸಂಗ. ಇಲ್ಲಿ ಬಿಡುವ ಸಂಗವಿಲ್ಲ, ಹಿಡಿಯುವ ಸಂಗವಿಲ್ಲ, ಇದಲ್ಲವೆಂದು ಬಿಡುವ ಸಂಗವಿಲ್ಲ, ಇದು ಅಹುದೆಂದು ಹಿಡಿಯುವ ಸಂಗವಿಲ್ಲ, ಸಗುಣ, ನಿರ್ಗುಣವೆಂಬುದಕ್ಕೂ ಅವಕಾಶ ಕೊಡದ ಘನಕ್ಕೆ ಘನವಾದ ಸಂಗ. ಅರಿವುದೇನೊ ? ಮರೆವುದೇನೋ ? ನಿಮ್ಮ ಸಂಗ ಸ್ವಯ ಲಿಂಗವಾಗಿರುವಲ್ಲಿ ಅದನ್ನು ಅರಿವುದೆಂತು, ಮರೆವುದೆಂತು.

***ಎನಗೆ ಪ್ರಾಣವು ನೀವೆ ಬಸವಯ್ಯ :***

ಪ್ರಾಣದ ಪ್ರಾಣವು ನೀವೆ ಬಸವಯ್ಯ. ಏಕೆಂದರೆ ನೀವು ಪ್ರಾಣದ ಭ್ರಮೆಯವರಾಗದ್ದರಿಂದ ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗವು ನೀವೆ ಬಸವಯ್ಯ. ಅಗಣಿತ ನೀವೆ ಬಸವಯ್ಯ, ಅಕ್ಷರೇಶ್ವರ ನೀವೆ ಬಸವಯ್ಯ. ಪ್ರಣವದಿಂದತ್ತತ್ತ ನೀವೆ ಬಸವಯ್ಯ. ಜ್ಯೋತಿಗೆ ಜ್ಯೋತಿಯಾಗಿಹ ಪರಂಜ್ಯೋತಿ ನೀವೆ ಬಸವಯ್ಯ. ಎನ್ನ ಹೃದಯ ಕಮಲದೊಳ್ ಪ್ರಜ್ವಲಿಸುವ ಸ್ವಯಂಜ್ಯೋತಿ ಲಿಂಗ ನೀವೆ ಬಸವಯ್ಯ. ಈ ಪರಿಯಲ್ಲಿ ಎನ್ನಂತರಂಗದೊಳ್ ನೀವು ತೋರಿದಿರಾಗಿ ಎನಗೆ ಪ್ರಾಣವು ನೀವೆ ಬಸವಯ್ಯ ಎಂದು ಹೇಳಿಹಳು.

***ಎನಗೆ ಪ್ರಸಾದವು ನೀವೆ ಬಸವಯ್ಯ :***

ಓಹೊ ! ಘನಮಹಿಮನೆ, ಎನಗೆ ನಿಮ್ಮ ಪ್ರಸಾದ ವರ ಪ್ರಸಾದ, ಪರಮ ಪ್ರಸಾದ, ಅವರ್ಣೀಯ ಪ್ರಸಾದ, ತೃಪ್ತರೂಪ ಅಚಿಂತ್ಯ ಪ್ರಸಾದ. ನೀವೆ ಆಗಿಹ ಘನಕ್ಕೆ ಘನವಾದ ಪ್ರಸಾದ. ಪ್ರಸಾದವದು ಪರಮ ಜ್ಞಾನವಯ್ಯ. ಪರಮಾನಂದ ಪರಮಾಮೃತವಾದುದರಿಂದ ನುಡಿದನುಡಿಯ ನಡೆಯದ ಇರವು. ನಡೆದ ನಡೆಯ ನುಡಿಯದ ಇರವು; ಶಬ್ದ ಅಪಶಬ್ದ ಕ್ಕೊಳಪಡದ ಜ್ಞಾನ. ಇದ್ದವರು ಇದ್ದುದನರಿತ ಜ್ಞಾನ. ಇಂತಪ್ಪ ಮಹದಿರುವು ತಾನಾಗಿಹ ಅಚಿಂತ್ಯದಿರುವೆ ಎನಗೆ ಪ್ರಸಾದವು ನೀವೆ ಬಸವಯ್ಯ ಎಂದು ಹೇಳಿಹಳು.

***ಎನಗೆ ಪ್ರಭೆಯ ಮೂರ್ತಿ ನೀವೆ ಬಸವಯ್ಯ :***

ಇದಾವ ಪ್ರಭೆಯ ಮೂರ್ತಿ? ತನಗಿಂತನ್ಯವಾಗದ ಪ್ರಭೆಯ ಮೂರ್ತಿ ಹೊರಗೆ ತೋರುವ ಪ್ರಭೆಯ ಮೂರ್ತಿಯು ಅಲ್ಲ, ಒಳಗೆ ತೋರುವ ಪ್ರಭೆಯ ಮೂರ್ತಿಯು ಅಲ್ಲ, ಸಟೆಯ ಪ್ರಭೆಯ ಮೂರ್ತಿಯು ಅಲ್ಲ, ಸಾಕಾರ ಪ್ರಭೆಯ ಮೂರ್ತಿಯು ಅಲ್ಲ, ನಿರಾಕಾರ ಪ್ರಭೆಯ ಮೂರ್ತಿಯು ಅಲ್ಲ, ಸಾಕಾರ, ನಿರಾಕಾರ ಏಕೋದೇವನಾಗಿಹ ಪ್ರಭೆಯಮೂರ್ತಿ ನೀವೆ ಬಸವಯ್ಯ. ಸಗುಣ ನಿರ್ಗುಣವೆಂಬೆಡೆಗೊಡದ ಪ್ರಭೆಯ ಮೂರ್ತಿ ನೀವೆ ಬಸವಯ್ಯ.

***ಎನಗೆ ಸಂಗಯ್ಯನು ನೀವೆ ಬಸವಯ್ಯ :***

ಓ, ಎನಗೆ ನೀವೆ ಸಂಗಯ್ಯನಾದ ಕಾರುಣ್ಯ. ಮಹಾಕಾರುಣ್ಯ ನೋಡಾ. ನಾನೆಂಬುದಕ್ಕೂ ಇಂಬುಗೊಡದ ಸಂಗಯ್ಯ. ನೀವೆಂಬುದಕ್ಕೂ ಇಂಬುಗೊಡದ ಸಂಗಯ್ಯ. ಜೀವನೆಂಬುದಕ್ಕೂ ಇಂಬುಗೊಡದ ಸಂಗಯ್ಯ. ಅಂತರಾತ್ಮನೆಂಬುದಕ್ಕೂ ಇಂಬುಗೊಡದ ಸಂಗಯ್ಯ; ಪರಮ ನೆಂಬುದಕ್ಕೂ ಇಂಬುಗೊಡದ ಸಂಗಯ್ಯ; ಗುರು ಲಿಂಗ ಜಂಗಮ ವೆಂಬುದಕ್ಕೂ ಇಂಬುಗೊಡದ ಸಂಗಯ್ಯ. ತಾನೆ ಗುರುಲಿಂಗ, ತಾನೆ ಸ್ವಯಲಿಂಗ, ತಾನೆ ಲಿಂಗ ಒಂದಾಗಿರ್ದ ಜಂಗಮ. ಇಂತಪ್ಪ ಮಹಾಲಿಂಗವೆ ನಿಮ್ಮಯ ಇರುವು ನನ್ನಯ ಇರುವು ಆದುದರಿಂದ ನಿಮ್ಮ ಘನ ಕೃಪೆಯಿಂದ ಘನಕ್ಕೆ ಘನವಾಗಿಹ ನುಡಿಗೆಡೆಗೊಡದ ಘನದಿರುವೆ ನನ್ನಿರುವಾಗಿಹ ಸಂಗಯ್ಯ ನೀವೆ ಬಸವಯ್ಯ ಎಂದು ಹೇಳಿಹಳು.

# ನಿರ್ವಾಣದ ನಿಜೈಕ್ಯ

**ಎರಡಿಲ್ಲದ ವಸ್ತುವೆ ನೀ ನೆರಡಾದೆಯಲ್ಲ ಬಸವಯ್ಯ,**
**ಎರಡನೇಕೀಕರಿಸಿ ಭ್ರಮೆಯ ಬಿಡಿಸಿದೆಯಲ್ಲ ಬಸವಯ್ಯ,**
**ಭ್ರಮೆಯನಳಿದು ಪರಿಣಾಮದ ಸಂಗ ಮಾಡಿದೆಯಲ್ಲ ಬಸವಯ್ಯ,**
**ತೆರಹಿಲ್ಲದ ವಸ್ತುವಾದೆಯಲ್ಲ ಬಸವಯ್ಯ ಗುರುವೆ,**
**ಸಂಗಯ್ಯನಲ್ಲಿ ಸದುಹೃದಯನಾದೆಯಲ್ಲ ಬಸವಯ್ಯ.**

**ತಾತ್ಪರ್ಯ : *ಎರಡಿಲ್ಲದ ವಸ್ತುವೆ ನೀ ನೆರಡಾದೆಯಲ್ಲ ಬಸವಯ್ಯ* :** ಎರಡು ಮಾಡಲು ಬಾರದ ವಸ್ತು ? ಇದಾವ ವಸ್ತು ? ಕಾಬಡೆ ಕುರುಹಿಲ್ಲ, ನೆನೆವಡೆ ಮನಕ್ಕೆ ನಿಲುಕದ ಘನವು. ಪೂಜಿಸುವುಡೆ ನಿರೂಪವು. ವರ್ಣಿಸುವಡೆ ವರ್ಣಾತೀತ, ಅಪ್ರಮಾಣ, ಅಪ್ರತಿಮ ಅಗಮ್ಯವೆ. ಇಂತಪ್ಪ ಪರಾತ್ಪರ ಪರವಸ್ತುವದು ಎರಡಿಲ್ಲದ ವಸ್ತು. ಇದು ಅಂಗವೆನ್ನಲು ಬಾರದ ಘನ. ಲಿಂಗವೆನ್ನಲು ಬಾರದ ಘನ. ಸಂಗಿಯಾಗದ ಘನ, ನಿಸ್ಸಂಗಿಯಾಗದ ಘನ, ನಿರ್ವಾಣದ ನಿಜೈಕ್ಯವು. ಅದನ್ನು ಶಬ್ದದಲ್ಲಿ ಬಳಸುವುದು ಹೇಗೆ ?

ಗುರು ಕೃಪೆಯುಳ್ಳವರಿಗೆ ಮುಂದೆ ನಿಂತಿಹುದು, ಎಲ್ಲೆಲ್ಲೂ ತುಂಬಿಹುದು ಅದು ತೋರಬಾರದ ಘನವಾಗಿ ಹೇಳಲಿಂಬಿಲ್ಲವಾಯಿತ್ತು. ಮನವು; ಮನದ ಮನವಾಗಿ ತಾನೆ ತಾನಾಯಿತ್ತು. ಸ್ವಯಂಭುವೆನಿಸಿತ್ತು. ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಲ್ಲಾ ಒಂದನಂತ ಕಾಲ. ಮಹವು ಮಹದಾನಂದ ದಲಕ್ಕಾಡಲು ಮತ್ತಲ್ಲಿಯೆ ಲೀಯ

ವಾಗಿರ್ದರಯ್ಯ ಒಂದನಂತ ಕೋಟಿ ವರ್ಷ ಕೂಡಲ ಸಂಗಮದೇವಾ ವಿಪರೀತ ಚಾರಿತ್ರ. ನಿಮ್ಮಿಂದ ನೀವೇ ಆದುದು ಅದು ವಿಪರೀತ ಚಾರಿತ್ರ. ನೀವು ಸ್ವಯಂಬು, ನಿಮ್ಮ ನಾರು ಮಾಡುವುದು.

ಘಟಾಕಾಶ ಮಠಾಕಾಶ ತನ್ನಿಂದ ತಾನಾದುದು. ಘನಮಠ ಅಹುದು ಆಕಾಶ ಮಾತ್ರ ಆವ ನರರು ಸುರಾಸುರರು ಮಾಡಿದುದಲ್ಲ. ತನ್ನಿಂದ ತಾನೆ ಆದುದು. ಹಾಗೆ ಸ್ಥಾವರ ಜಂಗಮವಾದುದು ಸ್ಥಾವರ ಜಂಗಮವೆನ್ನದೆ ಭರಿತವಾದುದು ಅದು ತೆರಹಿಲ್ಲದ ಘನವಾದುದು. ಅದು ಎರಡಿಲ್ಲದ ವಸ್ತುವೆಂದು ಹೇಳಿಹರು. ನೀನೆರಡಾದೆಯಲ್ಲ ಬಸವಯ್ಯ. ಓಹೊ ! ಬಸವಯ್ಯ ಏನಿದು ? ನಿನ್ನ ಸ್ವಯಂಭುಲೀಲೆ, ಎರಡಿಲ್ಲದ ವಸ್ತು ನೀನೆ, ಎರಡಾದುದು ನೀನೆ, ಅದಾರಯ್ಯ ನಿರ್ಣಯಿಸುವುದು!

ಮಹವು ಮಹದಾನಂದದಲಕ್ಕಾಡಲು ಎರಡಾಗಿ ತೋರಿತ್ತೆ ? ಮತ್ತಲ್ಲಿಯೆ ಲೀಯವಾಗಿ ಎರಡಿಲ್ಲದ ವಸ್ತುವಾಯಿತ್ತೆ ? ಈ ಸ್ವ ಲೀಲೆಗೆ ಏನನ್ನಬೇಕು ? ತಾನೆ ಸ್ವಾಮಿ, ತಾನೆ ಸೇವಕ ಎನ್ನಲೆ ? ಎನ್ನಲಾಗದು; ಕಲ್ಪಿತ ಭಕ್ತನ ಮಾಡಿ ಅಕಲ್ಪಿತ ಲಿಂಗ ಮಾಡಿದುದು. ಇದು ಮಾಯಿಕ ಚಾರಿತ್ರ. ಇದು ಎರಡಿಲ್ಲದ ವಸ್ತು ಕಂಡುದಲ್ಲ, ಮಹವು ಮಹದಾನಂದದಲಕ್ಕಾಡಲು ಬಂದುದು ಅಲ್ಲ, ನೀನೆರಡಾದುದು ಅದನೆಂತು ವರ್ಣಿಸುವುದು. ಮಹವಾಗಿ ತೋರಿದುದು ಎರಡಿಲ್ಲದ ವಸ್ತು. ಮಹದಾನಂದದಲಕ್ಕಾಡಲು ಬಂದುದು ಎರಡಿಲ್ಲದ ವಸ್ತು. ಭಕ್ತನಾದುದು ಎರಡಿಲ್ಲದ ವಸ್ತು. ಜಂಗಮನಾದುದು ಎರಡಿಲ್ಲದ ವಸ್ತು. ಜಂಗಮನು ಸ್ವಯಂಭು, ಭಕ್ತನು ಸ್ವಯಂಭು. ಗುರುವಾದುದು ಸ್ವಯಂಭು. ಶಿಷ್ಯನಾದುದು ಸ್ವಯಂಭು, ಸಕಲ ನೀನು, ನೀನೆರಡಾದೆಯಲ್ಲ ಬಸವಯ್ಯ ಎಂದು ಹೇಳಿಹರು.

***ಎರಡನೇಕೀಕರಿಸಿ ಭ್ರಮೆಯ ಬಿಡಿಸಿದೆಯಲ್ಲ ಬಸವಯ್ಯ*** :

ಮಹವು ಮಹದಾನಂದದಲಕ್ಕಾಡಿದ ಅಭಿನಯವೆ ಎರಡನೇಕೀಕರಿಸಿ ಭ್ರಮೆಯ ಬಿಡಿಸಿದುದು ಮಹದಾನಂದದ ಲಕ್ಕಾಡಿದ ಆಟ. ಅದು ಭಕ್ತನಾಗಿ ತೋರಲಿ, ಜಂಗಮವಾಗಿ ತೋರಲಿ ಗುರುವಾಗಿ ತೋರಲಿ, ಶಿಷ್ಯನಾಗಿ ತೋರಲಿ, ಅದು ಮಹವು. ಅದು ತೋರಬಾರದ ಘನ. ಅಲ್ಲಿ ಮರವು ಅರುವಿನ ಎಡೆಯಾಟಕ್ಕಿಂಬಿಲ್ಲದ ಅಭಿನಯ. ಮಹದಾನಂದದ ಲಕ್ಕಾಡಿದ ಅಭಿನಯವಾದ್ದರಿಂದ ನಾನೀನೆಂಬುದಕ್ಕೂ ಅವಕಾಶ ಕೊಡದ ಅಭಿನಯ. ಅಹುದು ಅಲ್ಲವೆಂಬುದಕ್ಕೂ ಅವಕಾಶಕೊಡದ ಅಭಿನಯ. ಭಕ್ತ ಜಂಗಮರಾಗಲಿ, ಗುರು ಶಿಷ್ಯರಾಗಲಿ, ಇವರುಗಳ ಅಭಿನಯಕ್ಕೆ ಉತ್ಪತ್ತಿ ಇಲ್ಲ. ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ. ಸ್ಥಿತಿ ಇಲ್ಲಾಗಿ ಲಯವಿಲ್ಲ. ಲಯವಿಲ್ಲಾಗಿ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯವಾಗಿಹ ಅಭಿನಯವಾದುದರಿಂದ ಎರಡನೇಕೀಕರಿಸಿ ಭ್ರಮೆಯ ಬಿಡಿಸಿದೆಯಲ್ಲ ಬಸವಯ್ಯ ಎಂದು ಹೇಳಿಹರು.

***ಭ್ರಮೆಯಳಿದು ಪರಿಣಾಮದ ಸಂಗ ಮಾಡಿದೆಯಲ್ಲ ಬಸವಯ್ಯ*** :

ಶರಣ ಶರಣೆಯರು ಎರಡಿಲ್ಲದ ವಸ್ತುವ ತಿಳಿದವರು. ಎರಡಾದಂತೆ ತೋರಿ ಎರಡಾಗದವರು. ಏಕೆಂದರೆ ನಿರಂತರವಾಗಿಹ ಮಂಗಲಮಯ ನುಡಿಗೆಡೆಗೊಡದ ಘನವಾಗಿಹ ಸ್ವಯಂಭುವಾದುದರಿಂದ ಭ್ರಮೆ ಅಳಿದುದು, ಅವರಲ್ಲಿ ಎರಡಾಗಿ ಕಂಡುದೆಲ್ಲ ವಿನೋದವೆ! ಪ್ರಮಾದ ದೃಷ್ಟಿಗೆ ಗುರು-ಶಿಷ್ಯರಾದುದು ಸತ್ಯವಾಗಿದೆ. ಭಕ್ತ-ಜಂಗಮರಾದುದು ಸತ್ಯವಾಗಿದೆ. ಮರವು-ಅರುವು ಸತ್ಯವಾಗಿದೆ. ಅಜ್ಞಾನ-ಜ್ಞಾನ ಸತ್ಯವಾಗಿದೆ. ಬಂಧ-ಮೋಕ್ಷ ಸತ್ಯವಾಗಿದೆ.

ಇದು ಕಾರಣ ಭ್ರಮೆ ಅಳಿದವರಲ್ಲ. ಶರಣರು ಭ್ರಮೆ ಅಳಿದುದರಿಂದ ಪರಿಣಾಮದ ಸಂಗ ಮಾಡಿದವರು.

ಆವಲ್ಲಿ ಸರ್ವ ಪ್ರಪಂಚ ನಿವೃತ್ತವಾಗಿಹುದು. ಅದೀಗ ಬ್ರಹ್ಮಜ್ಞಾನ. ಆವಲ್ಲಿ ಆನೆಂಬ ತೋರಿಕೆ ಹುಟ್ಟದಿಹುದು ಅದೀಗ ಬ್ರಹ್ಮಜ್ಞಾನ. ಆವಲ್ಲಿ ಕೇವಲ ನಿಶ್ಚಿಂತವಾಗಿಹುದು ಅದೀಗ ಬ್ರಹ್ಮಜ್ಞಾನ. ಆವಲ್ಲಿ ಕೂಡಲ ಚೆನ್ನಸಂಗಯ್ಯನಲ್ಲಿ ಮತ್ತೊಂದನರಿಯದಿಹುದು ಅದೀಗ ಬ್ರಹ್ಮ ಜ್ಞಾನ. ಭ್ರಮೆ ಅಳಿದ ಚಿನ್ಹವದು. ಸರ್ವಪ್ರಪಂಚ ನಿವೃತ್ತವಾಗಿಹುದು. ಇದಲ್ಲದೆ ಆನೆಂಬ ತೋರಿಕೆ ಹುಟ್ಟದಿಹುದಲ್ಲದೆ ಕೇವಲ ನಿಶ್ಚಿಂತೆಯಾಗಿ ಎಲ್ಲೆಲ್ಲೂ ಎರಡಿಲ್ಲದ ವಸ್ತುವ ಕಂಡುದು ಇದು ಪರಿಣಾಮದ ಸಂಗ ಮಾಡಿದ ಹಿರಿಮೆಯು ಎಂದು ತಿಳಿವುದು.

***ತೆರಹಿಲ್ಲದ ವಸ್ತುವಾದೆಯಲ್ಲ ಬಸವಯ್ಯ ಗುರುವೆ :***

ಓ ಬಸವಯ್ಯ ಗುರುವೆ, ಸಕಲರ ಗುರುತನದಂತೆ ನಿನ್ನ ಗುರುತನವಲ್ಲ ನೋಡಾ. ನಿನ್ನದು ಗುರುಲಿಂಗವಾಗಿಹ ಗುರುತನ. ಬೋಧ-ಅಬೋಧ ಕಾಣದ ಗುರುತನ. ಅಜ್ಞಾನ-ಜ್ಞಾನ ಕಾಣದ ಗುರುತನ. ಮರವರುವು ಕಾಣದ ಗುರುತನ. ನಿನ್ನ ಗುರುತನದಲ್ಲಿ "ಗುರುವೆಂದಲ್ಲಿಯೆ ತಪ್ಪಿತ್ತು. ಲಿಂಗವೆಂದಲ್ಲಿಯೆ ತಪ್ಪಿತ್ತು ಜಂಗಮವೆಂದಲ್ಲಿಯೆ ತಪ್ಪಿತ್ತು ಪ್ರಸಾದವೆಂದಲ್ಲಿಯೆ ತಪ್ಪಿತ್ತು. ಈ ಚತುರ್ವಿಧ ಸಂಚಯ ನಿಕ್ಷೇಪವರಿತ ಗುರುತನ". ಇದು ತನ್ನ ಅಂತರಂಗದೊಳು ಕಂಡ ಗುರುವಿಂಗೆ ಗುರುವಾಗಿಹ ಗುರುಲಿಂಗ. ಲಿಂಗಕ್ಕೆ ಲಿಂಗವಾಗಿಹ ಸ್ವಯ ಲಿಂಗ. ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯವಾದ ನಿರ್ನಾಮ ಜಂಗಮ ಲಿಂಗವ ತನ್ನ ಸ್ವಸ್ವರೂಪವಾಗಿ ಕಂಡ ಅಖಂಡಿತನ ನಿಲುವುಳ್ಳ ಅಪ್ರಮಾಣನಾದುದರಿಂದ ತೆರಹಿಲ್ಲದ ವಸ್ತುವಾದೆಯಲ್ಲ ಬಸವಯ್ಯ ಗುರುವೆ ಎಂದು ಹೇಳಿಹರು.

***ಸಂಗಯ್ಯನಲ್ಲಿ ಸದುಹೃದಯನಾದೆಯಲ್ಲ ಬಸವಯ್ಯ :***

ತೆರಹಿಲ್ಲದ ಘನವಾಗಿಹ ಸಂಗಯ್ಯನಲ್ಲಿ ಹೃದಯವು ತೆರಹಿಲ್ಲದ ಘನದ ಹೃದಯವಾದುದು ಅದು ಸದು ಹೃದಯವು. ಇದು ಅರಿಯಲಿಲ್ಲದ ಅರುವೆ ಅರಿತ ಹೃದಯ. ಅದು ಅರಿಯಲಿಲ್ಲ, ಮರೆಯಲಿಲ್ಲದ ಹೃದಯವದು ಸದು ಹೃದಯ. ಬಸವಯ್ಯನ ಹೃದಯ ಸದು ಹೃದಯವಾದ ಹೃದಯಿನಾದೆಯಲ್ಲ ಬಸವಯ್ಯನೆಂದು ಹೇಳಿಹರು.

# ಬಸವಯ್ಯ ಶಬ್ದ ನಷ್ಟಮಾಡಿದ ನಿಶಬ್ದವೇದಿ

**ಏಕ ಏವ ದೇವನೊಬ್ಬನೆ ಶರಣ ಬಸವಯ್ಯ,**
**ಆ ಶರಣ ಬಸವಯ್ಯನಿರವೆ ಪರಮ ಪ್ರಸಾದ ರೂಪವಾಯಿತ್ತು.**
**ಆ ಪರಮ ಪ್ರಸಾದ ರೂಪ ಮೂರ್ತಿ**
**ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವಯ್ಯನು.**

**ತಾತ್ಪರ್ಯ : *ಏಕ ಏವ ದೇವನೊಬ್ಬನೆ ಶರಣ ಬಸವಯ್ಯ* :** ಏಕ ಏವ ಒಬ್ಬನೆ ಒಬ್ಬನು. ಒಬ್ಬನೆ ಒಬ್ಬನು ಇವನಾರು ? ದೇವನೊಬ್ಬನೆ ? ದೇವನಾರು ? ಅವನೆ ಒಬ್ಬನೇ ಒಬ್ಬನು. ಅಂತಪ್ಪ ದೇವನೊಬ್ಬನೆ ಶರಣ, ಆ ಶರಣನೆ ಬಸವಯ್ಯ. "ಪುರಾತನರ ವಚನವ

ಕಲಿತು ಹೇಳುವವರ ನೇನೆಂಬೆ. ಅದು ಕುಳ್ಳಿರ್ದು ಕೇಳುವವರ ನೇನೆಂಬೆ. ಇದಕ್ಕೆ ಮನನಾಚದವರ ನೇನೆಂಬೆ. ಕೂಡಲ ಚೆನ್ನಸಂಗಾ ಶಬ್ದ ನಷ್ಟವಾಗದವರ ನೇನೆಂಬೆ''.

ಏಕ ಏವ ದೋವನೊಬ್ಬನೆ ಎಂದುದು ಪುರಾತನರ ವಚನ. ಇದನ್ನು ಕಲಿತು ದೇವನೊಬ್ಬನೆ. ಅವನು ಒಬ್ಬನೆ ಒಬ್ಬನು ಎಂದು ಹೇಳುವವರು ಉಂಟು. ಅದನ್ನು ಕೂತು ಕೇಳುವವರು ಉಂಟು. ಅವರು ಹೇಳಿದುದನ್ನೆ ಹೇಳಿದರು. ಇವರು ಹೇಳಿದುದನ್ನೆ ಮುಂದೆ ಕೂತು ಕೇಳಿದರು. ಇವರುಗಳ ಮನ ನಾಚಲಿಲ್ಲ, ಏಕ ಏವ ದೇವನೊಬ್ಬನೆ ಎಂಬ ರಹಸ್ಯವ ತಿಳಿಯದ್ದರಿಂದ ಅವರು ವಚನವ ಕಲಿತು ಹೇಳುವವರಾದರು. ಇವರು ಮುಂದೆ ಕೂತು ಕೇಳುವವರಾದುದ ಕಂಡು ಇದಕ್ಕೆ ಮನ ನಾಚದವರ ನೇನೆಂಬೆ? ಇಂತಪ್ಪ ಹೃದಯಕ್ಕೇನನ್ನಬೇಕು. ಇದು ಕಾರಣ ಶಬ್ದನಷ್ಟವಾಗದವರ ನೇನೆಂಬೆ. ಇವರುಗಳು ಶಬ್ದನಷ್ಟವಾಗದವರು.

**ಬಸವಯ್ಯ ಶಬ್ದ ನಷ್ಟ ಮಾಡಿದ ನಿಃಶಬ್ದವೇದಿ.** ಏಕ ಏವ ದೇವನು ಶಬ್ದಮುಗ್ಧನು, ಮಾತಿಲ್ಲದವನು ಬಸವಯ್ಯ. ಶಬ್ದ ನಷ್ಟಮಾಡಿದುದರಿಂದ ಶಬ್ದಮುಗ್ಧನು. ಮಾತಿಲ್ಲದವನಾದುದರಿಂದ ಶರಣ ಬಸವಯ್ಯ. ಈತ ಮಹಾಘನನಾಗಿಹುದರಿಂದ ಏಕ ಏವ ದೇವನೊಬ್ಬನೆ ಶರಣ ಬಸವಯ್ಯನೆಂದು ಹೇಳಿಹರು.

ಒಬ್ಬನೇ ಒಬ್ಬನು, ದೇವನೊಬ್ಬನೆ ಎಂದು ನುಡಿವವರು ಸಿಕ್ಕುವರು. ದೇವನೊಬ್ಬನೆ ಎಂದು ನುಡಿಯ ನಷ್ಟ ಮಾಡಿದವರು ಸಿಕ್ಕಬಹುದೆ ? ನುಡಿಗಳು ನಷ್ಟ ಮಾಡಿದ ಮಹಾಂತನು ಅಂದರೆ ಶರಣ ಬಸವಯ್ಯನು. ಆ ಶರಣ ಬಸವಯ್ಯ ಶಬ್ದನಷ್ಟಮಾಡಿದುದರಿಂದ ಒಬ್ಬನೆ ಒಬ್ಬನು ಎನಲಿಲ್ಲ, ದೇವನೊಬ್ಬನೆ ಎನಲಿಲ್ಲ, ಏಕ ಏವ ದೇವನೊಬ್ಬನೆ ಎಂದು ನುಡಿಯುವವರುಂಟು, ಅರಿತವರುಂಟೆ?

''ಅರಿದೆವರಿದೆವೆನ್ನುವಿರಿ ಅರಿದ ಪರಿ ಎಂತು ಹೇಳಿರೆ ? ಅರಿದವರು ಅರಿದೆವೆನ್ನುವರೆ ? ಅರಿಯಬಾರದ ಘನವರಿತವರು ಅರಿಯದಂತಿಪ್ಪರು ಗುಹೇಶ್ವರಾ''.

ಒಬ್ಬನೆ ಒಬ್ಬನಾಗಿಹ ದೇವನೊಬ್ಬನ ಅರಿದೆವೆನ್ನುವಿರಿ. ಇಂತಪ್ಪ ಮಹಾಘನವ ನೀವು ಅರಿತ ವಿಧಾನ ಯಾವುದು ? ಏಕ ಏವ ದೇವನೊಬ್ಬನೆ ಎಂದು ಸೂಚಿಸಿದ ಮಹಾಂತಳ ಮಹದರುವು ಇದು ಅರಿಯಬಾರದ ಘನ. ಇದುವೆ ಏಕ ಏವ ದೇವ. ಇಂತಪ್ಪ ಮಹಾಘನ ರಹಸ್ಯವರಿತವರೆಂದರೆ ಶರಣ ಬಸವಯ್ಯನು. ಈ ಅರಿಯಬಾರದ ಘನವರಿತು ಅರಿವ ಅರುಹಿಸಿಕೊಂಬ ಇವೆರಡನ್ನು ಅರಿಯಲಿಲ್ಲ, ತನ್ನಿರುವ ಮರೆಯಲಿಲ್ಲವೆಂದು ತನ್ನ ಪ್ರಸಾದ ವಾಣಿಯಿಂದ ಬಿತ್ತರಿಸಿದುದು ನೋಡಿದಡೆ ತಾನೆ ಅರಿಯಬಾರದ ಘನವಿರುವಲ್ಲಿ, ತನ್ನಿರುವಿನಲ್ಲಿ ತಾ ಲೀಯವಾದುದರಿಂದ ನಿಜವ ನಿಂದಿತ್ತಾಗಿ ನಾಮ ನಿರ್ನಾಮವಾಯಿತ್ತು. ನಿಷ್ಪತ್ತಿಯಾಯಿತ್ತು ಎಂದು ಹೇಳಿಹಳು.

**ಆ ಶರಣ ಬಸವಯ್ಯನ ಇರವು ಪರಮ ಪ್ರಸಾದ ರೂಪಾಯಿತ್ತು :**

ಆ ಶರಣ ಬಸವಯ್ಯನ ಇರುವು ಭಾವಕ್ಕಿಂಬುಗೊಡದ ಇರವು. ಶಬ್ದನಷ್ಟವಾದ ಇರವು. ನುಡಿಗೆಡೆಗೊಡದ ಇರವು. ಕೊನೆ ಮೊದಲಿಲ್ಲದ ಇರವು. ಇಂತಪ್ಪ ಮಹದಿರುವು ಪರಮ ಪ್ರಸಾದ ರೂಪವಾಯಿತ್ತು. ಶಬ್ದಮುಗ್ಧವಾಗಿಹ ಜ್ಞಾನಾಮೃತ ಜ್ಞಾನಾನಂದ ಪರಮಾಮೃತವಾಗಿಹ ಸ್ವಯಲಿಂಗದಿರುವು ಪರಮ ಪ್ರಸಾದ ರೂಪವಾಯಿತ್ತು.

**ಆ ಪರಮ ಪ್ರಸಾದ ರೂಪ ಮೂರ್ತಿ ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವ**

ಯ್ಯನು : ಸದ್ಗುರುವೆಂಬುದು ಸಂಗನ ನಿಜ ನಿವಾಸಿಯಾಗಿಹ ಸದ್ಗುರು ಬಸವಯ್ಯನು. ಸದ್ಗುರುವೆಂಬುದು ಅದು ಪರಮ ಪ್ರಸಾದ ರೂಪವು. ರೂಪ, ಇದು ನಿರೂಪ ರೂಪ. ಏಕೆಂದರೆ ಆ ಪ್ರಸಾದ ರೂಪ ಮೂರ್ತಿಯಾದುದರಿಂದ ಸದ್ಗುರು ರೂಪ ನಿರೂಪದ ರೂಪ. ಮೂರ್ತಿ ಇದು ನಿರೂಪ ಮೂರ್ತಿ; ಅಖಂಡ ಮೂರ್ತಿ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ರೂಪಾಗಿಹ ವ್ಯಾಪಕ ಮೂರ್ತಿ. ಇದು ಕೂಡಿ ಬೆರಸದ ಮೂರ್ತಿ. ಅಗಲಿ ಹಿಂಗದ ಮೂರ್ತಿ, ರೂಪ-ಅರೂಪವೆಂಬುದಕ್ಕೆಡೆಗೊಡದ ಮೂರ್ತಿ, ಸಂಗ ಅಸಂಗವೆಂಬುದಕ್ಕೆಡೆಗೊಡದ ಮೂರ್ತಿ, ಜ್ಞಾನದ ಜ್ಞಾನ ಮೂರ್ತಿ, ಆನಂದದ ಆನಂದ ಮೂರ್ತಿ, ಅಮೃತದ ಅಮೃತವಾದ್ದರಿಂದ ನಾಮ ನಿರ್ನಾಮವಾದ ಮೂರ್ತಿ. ಮೂರ್ತಿ ಹೇಗೆ ಶಬ್ದಮುಗ್ದವಾಗಿದೆ, ಹಾಗೆ ಗಗನ ಸದೃಶವಾಗಿಹ ಜ್ಞಾನಾಮೃತ ಮೂರ್ತಿ, ಸದ್ಗುರು ಮೂರ್ತಿ ಎಂದು ಹೇಳಿಹರು.

ಸದ್ಗುರು ರೂಪ ಅನಂತ, ಇದು ಕೊನೆ ಮೊದಲಿಲ್ಲದ ಘನವು. ಅಂದು ಇಂದು ಎಂದೆಂದೂ ಇದ್ದಂತಿದ್ದ ಅಭೇದ್ಯರೂಪ, ಇಂತಪ್ಪ ಅ ಅಭೇದ್ಯರೂಪ ತನ್ನಿಂದ ತನಗದು ವೇದ್ಯವಾದಲ್ಲಿ ಶಬ್ದಮುಗ್ಧನಾದುದು. ಅದು ಪರಮ ಪ್ರಸಾದ ರೂಪ ಎಂದು ಹೇಳಿಹಳು.

# ತನ್ನಿರುವು ತನಗೆ ಕರಗತವಾದ ಹರ್ಷ

**ಏತರಲ್ಲಿಯೂ ಹೆಸರಿಲ್ಲದ ಕುರುಹು ಈ ವಸ್ತು ಬಸವಯ್ಯನು.**
**ಏತರಲ್ಲಿಯೂ ನೆಲೆಯಿಲ್ಲದ ಮೂರ್ತಿ ಈ ವಸ್ತು ಬಸವಯ್ಯನು.**
**ಏತರಲ್ಲಿಯೂ ತೆರಹಿಲ್ಲದ ಪರಿಪೂರ್ಣವಾಗಿರಲು ಬಸವಯ್ಯನು.**
**ಪ್ರಭೆ ಬೆಳಗಿತ್ತು ಬಸವಂಗೆ, ಪ್ರಕಾಶ ವಡಗಿತ್ತು ಬಸವಂಗೆ.**
**ಪರಿಣಾಮ ಉಡುಗಿತ್ತು ಬಸವಂಗೆ, ಮನವಳಿಯಿತ್ತು ಬಸವಂಗೆ.**
**ಸಂಗಯ್ಯನಲ್ಲಿ ಬಸವ ಸ್ವಯಲಿಂಗಿಯಾದ ಬಳಿಕ.**

**ತಾತ್ಪರ್ಯ : ಏತರಲ್ಲಿಯೂ ಹೆಸರಿಲ್ಲದ ಕುರುಹು ಈ ವಸ್ತು ಬಸವಯ್ಯನು :**
ನಿಜವರಿತು ನಿಜೈಕ್ಯನಾಗಿ ನಿಂದವರ ದಿವ್ಯದೃಷ್ಟಿ ಅದೆಂತುಪಮಿಸುವುದು? ಗೂಗೆ ಬೆಳಕಿನ ಘನವನೇನು ಬಲ್ಲದು? ಕುರುಡಂಗೆ ಬೆಳಕು ಕಂಡುದೆಂತು? ಲೋಕವು ಅಲೌಕಿಕನ ಘನವೇನು ಬಲ್ಲದು. ವಿಷಮ ದೃಷ್ಟಿಯುಳ್ಳವನು ಸಮತೆಯೆ ತನ್ನಿರುವಾಗಿಹ ತಾನಾಗಿಹ ಘನವನೇನು ಬಲ್ಲನು? ಪಾಪಿಯು ಪುಣ್ಯವನೇನು ಬಲ್ಲನು? ಯೋಗಿಯು ವಿಯೋಗಬಲ್ಲನೆ? ವಿಯೋಗಿ ಯೋಗದ ರಹಸ್ಯವನೇನು ಬಲ್ಲನು? ಯೋಗ ವಿಯೋಗವೆಂಬೆರಡಿಲ್ಲದ ನಿಜವ ಬಲ್ಲವರು ಯೋಗ ವಿಯೋಗವ ಕಾಣರು. ನಿಜವರಿತವರು ಇದ್ದುದ ಕಂಡವರು ನೀಲಾಂಬಿಕೆ. ಅಂದು ಇಂದು ಎಂದೆಂದೂ ಇದ್ದ ಘನವ ಕಂಡುದರಿಂದ ಏತರಲ್ಲಿಯೂ ಹೆಸರಿಲ್ಲದ ಕುರುಹ ಕಂಡವರು; ವಸ್ತುವ ಕಂಡವರು; ಬಸವಯ್ಯನ ಕಂಡವರು.

ಹೆಸರಿಲ್ಲದ ಕುರುಹ ? ಇದು ಕಾಣದುದ ಕಂಡ ಕುರುಹು. ತಲೆಕೆಟ್ಟು ತಲೆಹಿಡಿದವರಿಗೆ ಕಾಣುವ ಕುರುಹು. ನಾಮ ನಿರ್ನಾಮವಾದವರಿಗೆ ಕಾಣುವ ಕುರುಹು. ಕಲ್ಪಿತ ಕೆಟ್ಟವರಿಗೆ ಕಾಣುವ ಕುರುಹು. ಇದು ಭಾವ ಭ್ರಾಂತರಿಗೆ ಕಾಣದ ಕುರುಹು. ಇದು ಏತರಲ್ಲಿಯೂ ಹೆಸರಿಲ್ಲದ ಕುರುಹು. ಈ ವಸ್ತು ಬಸವಯ್ಯನೆಂದು ಹೇಳಿಹಳು.

ಭ್ರಾಂತರಿಗೆ ಹೆಸರುಳ್ಳ ಕುರುಹು ಆದರೆ ಗುರುಕಾರುಣ್ಯವಂತನಿಗೆ ಏತರಲ್ಲಿಯೂ ಹೆಸರಿಲ್ಲದ ಕುರುಹ ಕಂಡಿತ್ತೆ ? ವಸ್ತುವಾಯಿತ್ತೆ ? ಇಂತಪ್ಪ ಮಹತ್ಕೃಪೆ ಅದಾರಿಗೆ? ಹೆಸರುಳ್ಳದು ಹೆಸರಿಲ್ಲದ್ದಾಯಿತ್ತೆ ? ಹುಟ್ಟಿದುದು ಹುಟ್ಟದ್ದಾಯಿತ್ತೆ ? ಆದಿ ಮಧ್ಯ ಅಂತ್ಯವೆಂಬುದು ನಿರ್ನಾಮವಾಗಿ ಅನಂತವಾಯಿತ್ತೆ ? ಗಣಿತವು, ಅಗಣಿತವಾಯಿತ್ತೆ ? ನುಡಿಗೊಳಪಟ್ಟುದು ನುಡಿಗೆಡೆಗೊಡದ ಘನವಾಯಿತ್ತೆ ? ಇದೆಂಥ ತಿರುವು ಮುರುವು. ಅವಸ್ತುವು ವಸ್ತುವಾಯಿತ್ತೆ ? ಪರಿಮಿತಿಯು ಅಪರಮಿತವಾಯಿತ್ತೆ ? ಸೀಮೆ, ನಿಸ್ಸೀಮೆಯಾಯಿತ್ತೆ ?

***ಏತರಲ್ಲಿಯೂ ನೆಲೆಯಿಲ್ಲದ ಮೂರ್ತಿ ಈ ವಸ್ತು ಬಸವಯ್ಯನು*** :

ಹೆಸರಿಲ್ಲದ ಕುರುಹು; ಇದು ಕಾಣಬಾರದ ಕುರುಹು. ಘನಗಂಭೀರವಾಗಿಹ ಮಹಾ ಘನವಾದ್ದರಿಂದ ನೆಲೆಯಿಲ್ಲದ ಮೂರ್ತಿ. ಇದು ಸ್ವಗತ ಭೇದವುಳ್ಳ ಮೂರ್ತಿಯು ಅಲ್ಲ. ವಿಜಾತ ಭೇದವುಳ್ಳ ಮೂರ್ತಿಯು ಅಲ್ಲ. ಸಜಾತಿ ಭೇದವುಳ್ಳ ಮೂರ್ತಿಯು ಅಲ್ಲ. ರೂಪ ಅರೂಪವೆಂಬುದಕ್ಕೂ ಸಮವಾದುದು ಆವುದು ಅದುವೆ ನೆಲೆಯಿಲ್ಲದ ಮೂರ್ತಿಯಾಗಿದೆ. ನೆಲೆಯಿಲ್ಲದ ಮೂರ್ತಿ ಅದು ಕ್ಷರ ವೆನ್ನಲು ಬಾರದ ಮೂರ್ತಿ. ಅಕ್ಷರವೆನ್ನಲು ಬಾರದ ಮೂರ್ತಿ. ಅದು ನಾಶವುಳ್ಳದ್ದೆನ್ನಲು ಬರದು, ಅವಿನಾಶಿ ಎನ್ನಲು ಬರದು. ನಾಶ ಅವಿನಾಶ ಎಂಬುದನ್ನು ಕಾಣದ ಶಬ್ದಮುಗ್ಧ ಅದು ನಿರುಪಮ ಘನ, ಇಂತಪ್ಪುದು ನೆಲೆಯಿಲ್ಲದ ಮೂರ್ತಿಯೆಂದು ಹೇಳಿಹರು.

ಆವುದು ಅಳಿದುದು, ಉಳಿದುದು ಆಗಿದೆ. ಅದು ನೆಲೆಯುಳ್ಳದ್ದಾಗಿದೆ. ಆವುದು ಅಹುದು ಅಲ್ಲವೆಂಬುವ ಸೀಮಿತಕ್ಕೊಳಪಟ್ಟಿದೆ; ಅದು ನೆಲೆಯುಳ್ಳದ್ದಾಗಿದೆ. ಆವುದು ಮರವರುವೆಂಬ ಬುದ್ಧಿಯುಳ್ಳದ್ದಾಗಿಹುದು ಅದು ನೆಲೆಯುಳ್ಳದ್ದಾಗಿದೆ. ಆವುದು ಅಳಿದುದಾಗಿಲ್ಲ, ಉಳಿದುದಾಗಿಲ್ಲ; ಅದು ಹೆಸರಿಲ್ಲದ ಕುರುಹು ಆಗಿದೆ. ಆವುದಕ್ಕೆ ಕ್ಷರವೆನ್ನಲು ಬಾರದಾಗಿದೆ; ಅಕ್ಷರವೆನ್ನಲು ಬಾರದಾಗಿದೆ. ಅಲ್ಲಿ ಬುದ್ಧಿ ಭಸ್ಮವಾಗಿದೆ. ಆವಲ್ಲಿ ಬುದ್ಧಿ ಭಸ್ಮವಾಗಿದೆ. ಅಲ್ಲಿಯೆ ನೆಲೆಯಿಲ್ಲದ ಮೂರ್ತಿಯ ನಿಲುವು ಆಗಿದೆ. ಅದುವೆ ವಸ್ತುವಾಗಿದೆ. ಅದುವೆ ಬಸವಯ್ಯನು ಎಂದು ಹೇಳಿಹಳು.

***ಏತರಲ್ಲಿಯೂ ತೆರಹಿಲ್ಲದೆ ಪರಿಪೂರ್ಣವಾಗಿರಲು ಬಸವಯ್ಯನು*** :

ಬಸವಯ್ಯನು ನಿರವಧಿಯು, ಸಾಕಾರವೆಂಬುದಕ್ಕೂ ನಿರಾಕಾರವೆಂಬುದಕ್ಕೂ ಅವಕಾಶ ಕೊಡದಂತಿದ್ದ ತುಂಬಿದ ಘನ. ಅವಕಾಶಕೊಡದಂತೆ ತುಂಬಿದುದು. ಸಗುಣ-ನಿರ್ಗುಣನೆನ್ನುವುದಕ್ಕೂ ಅವಕಾಶ ಕೊಡದ ನಿರವಧಿ. ನಿರವಧಿಯ ನಿಲುವು ಅಪಾರ, ಇದು ನೆಲೆಯಿಲ್ಲದ ನಿಲುವು. ಅಪಾರ ಕುರುಹು ಶಬ್ದ ನೆಲೆಯಿಲ್ಲದ ನಿಲುವು ಆಗದು.

ತೆರಹಿಲ್ಲದ ಪರಿಪೂರ್ಣವಾಗಿಹ ಘನ ತಾನೆ ತನ್ನಿಂದ ತನ್ನ ಕಂಡ, ತನ್ನಿರವು ಇಲ್ಲಿ ತೆರಹಿಲ್ಲದ ಪರಿಪೂರ್ಣವಾಗಿಹ ಬಸವನ ಕಂಡುದೆಂದರೆ ತನ್ನ ಕಂಡು ತಾನೆ ಆಗಿ ಕಂಡುದು; ಶಬ್ದಮುಗ್ಧವಾಗಿ ಕಂಡುದು ಮಾತಿಲ್ಲದವನಾಗಿ ಕಂಡುದು; ಮಾತಿಲ್ಲದವ ತಾನೆ. ಅಂದು ಇಂದು ಎಂದೆಂದೂ ಇದ್ದಂತಿದ್ದ ಮಹಾಘನವದು ತಾನೆ. ಇಂತಪ್ಪ ಪರಮ ರಹಸ್ಯವರಿತಲ್ಲಿ ಏತರಲ್ಲಿ ತೆರಹಿಲ್ಲದ ಪರಿಪೂರ್ಣವಾಗಿಹ ಬಸವಯ್ಯನ ಅರಿತಂತೆ. ತನ್ನಿಂದ ತನ್ನ ಅರಿತುದೆಂದಲ್ಲಿ ಈ ಮೂರು ಸಂಜ್ಞೆಯ ಅರಿತಂತೆ ಎಂದು ತಿಳಿವುದು.

***ಪ್ರಭೆ ಬೆಳಗಿತ್ತು ಬಸವಂಗೆ ಪ್ರಕಾಶ ವಡಗಿತ್ತು ಬಸವಂಗೆ*** :

ಪ್ರಭೆ ಬೆಳಗಿತ್ತು: ಇದಾವ ಪ್ರಭೆ ಬೆಳಗಿತ್ತು ? ಎರವಲ ಪ್ರಭೆ ಬೆಳಗಿದುದಲ್ಲ. ತನ್ನ ಸ್ವಪ್ರಭೆ ಬೆಳಗಿದುದರಿಂದ ಪರಪ್ರಭೆ ಅಡಗಿತ್ತು. ಪರ ಪ್ರಕಾಶವದು ಮಾಯಿಕ, ಆವ ಹೃದಯ ಸ್ವಪ್ರಭೆಯುಳ್ಳದ್ದಾಗುವುದು ಅಲ್ಲಿ ಪರ ಅಪ್ರಕಾಶವಡಗುವುದು. ಇಲ್ಲವಾದಲ್ಲಿ ಪರ ಪ್ರಕಾಶವೆ ಸ್ವಪ್ರಭೆಯಾಗಿ ಕಂಡುಬರುವುದು. ಇದು ಕಾರಣ ಆರಲ್ಲಿ ಸ್ವಪ್ರಭೆ ತನ್ನಿರುವಾಗಿ ತಾನೆ ತಾನಾಗಿ ಪ್ರಜ್ವಲಿಸುವುದು ತನಗೆ ವೇದ್ಯವಾದಲ್ಲಿ ತೋರಿಕೆಯ ಪ್ರಪಂಚದ ಸತ್ಯತ್ವವಾಗಲಿ ವೈರಾಗ್ಯ ತೋರಿಕೆಯಾಗಲಿ, ಪರಮಾರ್ಥದ ಬೋಧರೂಪ ಸತ್ಯತ್ವವಾಗಲಿ, ಮಿಥ್ಯೆತ್ವವೆಂಬ ಅನುಭವದ ತೋರಿಕೆಯು ಇವೆಲ್ಲವುಗಳ ಪ್ರಕಾಶ ಜ್ಞಾನವಡಗಿತ್ತು ಎಂಬುದು ಬಾಯಿ ಮಾತಿನವರ ನಿಲುವಲ್ಲ. ಮಾತನಳಿದು ನಿಂದವರ ನಿಲುವು ಎಂಬುದು ತನ್ನಿಂದ ತನಗೆ ವೇದ್ಯವಾಗುವುದು.

***ಪರಿಣಾಮ ಉಡಗಿತ್ತು, ಮನವಳಿಯಿತ್ತು ಬಸವಂಗೆ :***

ಪರಿಣಾಮವದು ತನ್ನಿರುವು, ಇದು ನೆಲೆಯೂರಿ ಸ್ಥಾಯಿಯಾಗಿ ಅಚಲವಾಗಿ ನಿಂತುದು, ಇದು ಗಗನ ಸದೃಶವಾಗಿ ನಿಂತ ನಿಲುವು. ಅದನಾವ ಭಾಷೆಯಿಂದ ಭಾಷಾಂತರಿಸುವುದು. ಹಾಗೆ ತಾನು ಮಾತಿಲ್ಲದ ಘನದಿರುವಿನಲ್ಲಿ ಅಚಲನಾಗಿ ನಿಂತುದು. ಇದು ನಿರಂತರವಾಗಿಹ **ತನ್ನಿರುವು ತನಗೆ ಕರಗತವಾದ ಹರ್ಷವು**. ಎಲ್ಲಿ ತನ್ನ ಹರ್ಷದುದಯವು ಅಲ್ಲಿ ಮನ ನಷ್ಟವು, ಹರ್ಷವದು ತನ್ನಿರುವು ತಾನೆ ಆದುದರಿಂದ ಮನ ನಷ್ಟವೆಂದು ಹೇಳಿಹರು.

***ಸಂಗಯ್ಯನಲ್ಲಿ ಬಸವ ಸ್ವಯಲಿಂಗಿಯಾದ ಬಳಿಕ :***

ಸಂಗಯ್ಯ ತೆರಹಿಲ್ಲದ ಲಿಂಗಭರಿತನೆಂಬ ಸಂಜ್ಞೆ ಧರಿಸಿದುದು. ಆರು ಗುರುಕಾರುಣ್ಯದಿಂದ ಅರಿದರಿದು ನೋಡಿ ಅದು ತನ್ನಿರುವು ಆದುದು. ಆಗ ತಾನು ಲಿಂಗಕ್ಕೆ ಲಿಂಗವಾಗಿಹ ಲಿಂಗ ಪ್ರಸಾದ ಕೊಂಡುದರಿಂದ ತಾನೆ ಲಿಂಗ, ಸ್ವಯಲಿಂಗಿ ತಾನಾದುದು ತನಗದು ಗೊತ್ತಾಗುವುದರಿಂದ ಸಂಗಯ್ಯನಲ್ಲಿ ಬಸವ ಸ್ವಲಿಂಗಿಯಾದ ಬಳಿಕ ಎಂದು ಹೇಳಿಹರು.

# ಮಾತನಳಿದ ಮಾತಿಲ್ಲದವನ ಹರ್ಷೋದ್ಗಾರ

**ಏಹೆ ! ಎಲೆ ಅಭವ ಬಸವಾ,**
**ಏಹೆ ! ಎಲೆ ಪರಿಣಾಮಿ ಬಸವಾ,**
**ಏಹೆ ! ಎಲೆ ವಿಚಾರಿ ಬಸವಾ,**
**ವಿಚಾರ ಸಂಗನ ನರಿದು ಹೇಳಲಿಲ್ಲವೆನಗೆ ಬಸವಾ.**
**ಹೇ ಹೇ ಎನಲೊಂದೆ ಸಂಗ ಸಂಗ,**
**ನಿರಂಗ ನಿರಂಗ, ಬಸವ ಬಸವ ಎಲೆ ಬಯಲು ॥**

**ತಾತ್ಪರ್ಯ : *ಏಹೆ ! ಎಲೆ ಅಭವ ಬಸವಾ :***

ಇದು ಅಭವ ಬಸವನ ಕಂಡರಿದ ಹರ್ಷೋದ್ಗಾರ ! ಆನಂದದಲ್ಲಿ ಪರವಶವಾದುದನ್ನು ಇಲ್ಲಿ ಕಾಣಬಹುದಾಗಿದೆ. ಎಹೆ ! ಎಂಬುದು ಭಾವಾವೇಶವೆನ್ನಲೆ ! ಅಥವಾ ತನ್ನ ಶರೀರ ಮರೆದು ಲೋಕವ ಮರೆದು ಕಾಣದುದ ಕಂಡದುದಕ್ಕಾದ ಹೃದಯ ವಿಕಾಸವೆನ್ನಲೆ

? ಮತ್ತಂ : ಆನಂದ ಪರವಶತೆಯಲ್ಲಿ ಹೊರಹೊಮ್ಮಿದ ಉದ್ಗಾರವೆನ್ನಲೆ ? ಸಕಲದರ ಹಂಗು ಹರಿದು ತನ್ನ ಸ್ವಯಂಭು ನಿಲುವು ತನ್ನಿಂದ ತನಗೆ ಕರಗತವಾಗಿ ನಿಂದ ನಿಬ್ಬೆರಗಿನಲ್ಲಿ ಬಂದುದೆನ್ನಲೆ ? ಗುರು ಘನವು, ತಾನು ಒಂದಾದ ಭರಿತ ಭಾವಾವೇಶವೆನ್ನಲೆ ? ಲಿಂಗ, ಲಿಂಗವೆಂಬ ಶಬ್ದವ ಕರಗಿ ತಾನೆ ಸ್ವಯಲಿಂಗಿಯಾಗಿಹ ತನ್ನಿರುವು ತನಗೆ ಕರಗತವಾಗಿ ಬಂದ ಆನಂದದ ಆವೇಶವೆನ್ನಲೆ ? ಎಲೆ ಅಭವ ಬಸವಾ ಎಂದುದು ಅರಿದರಿದು ನೋಡುವುಡೆ, ಇಲ್ಲಿ ಸೀಮಿತ ಕೆಟ್ಟುದರಿಂದ ಸಕಲದರ ಹಂಗ ಹರಿದು ಬಂದ ಪರವಶತೆಯ ಶಬ್ದ, ಅಹುದು ಅಲ್ಲವೆಂಬುದು ನಷ್ಟವಾಗಿ ನಿಶ್ಚಿಂತತೆಯಲ್ಲಿ ಬಂದ ಪರವಶತೆಯ ಶಬ್ದ. ನಾನೀನೆಂಬುದು ನಷ್ಟ ವಾಗಿ ನಿಂದು ತೆರಹಿಲ್ಲದ ಘನದಿರುವು ತನ್ನಯ ಇರುವಾಗಿ ನಿಂತ ನಿಲುವಿನಲ್ಲಿ ಪರವಶತೆಯ ಶಬ್ದ ಕಲ್ಪಿತದ ಕಲ್ಪನೆಗಳೆಲ್ಲ ಕೆಟ್ಟು ಅಕಲ್ಪಿತದಿರುವೆ ತನ್ನಿರುವಾಗಿ ಕಂಡ ಆವೇಶದ ಶಬ್ದ. ಎಲೆ ಅಭವ ಬಸವಾ ಎಂದು ಹೇಳಿಹಳು.

"ಅಭವ ಬಸವಾ ಎಂಬುದು ನಿರವಧಿಯಾಗಿಹ ನಿಜೈಕ್ಯ; ನಿಃಶಬ್ದ ಲಿಂಗಾನುಭವಿ. ಇತ್ತ ಮುಗ್ಧಾನುಭವಿ ಪ್ರಸಾದಿ ಪರಿಣಾಮಾನುಭಾವಿಯಾಗಿಹ ಮಹಾಪ್ರಸಾದಿ. ಇಂತೀ ತ್ರಿವಿ ಧಾನುಭಾವಿ ಕೂಡಲ ಚೆನ್ನಸಂಗ ನಿಮ್ಮ ಶರಣ". ಇಂತಪ್ಪ ತ್ರಿವಿಧಾನುಭಾವಿಯಾಗಿಹುದ ರಿಂದ ಅಭವ ಬಸವಾ. ಈ ಮಹಾಂತನ ಕಾರುಣ್ಯದಿಂದ ಲಿಂಗವೆಂಬುದು ತಪ್ಪು. ಅಂಗ ವೆಂಬುದು ತಪ್ಪು, ಮರವೆಂಬುದು ತಪ್ಪು, ಅರುವೆಂಬುದು ತಪ್ಪು, ಇದು ತಪ್ಪೆಂಬುದು ಅರಿ ಯಲಿಲ್ಲದ ಅರುವಾಗಿಹ ಬಸವಯ್ಯನ ಮಹದಿರುವ ಕಂಡು ಎನ್ನ ಅರುವೆಂಬುದು ಇಲ್ಲ ವೆಂಬುದು ಇಲ್ಲವಾದುದ ಬಲ್ಲೆನಾಗಿ ಅತಿ ಹರ್ಷವಾಗಿ ಪರವಶನಾಗಿ ಏಹೆ ! ಎಲೆ ಅಭವ ಬಸವಾ ಎಂದು ಕೊಂಡಾಡಿಹಳು.

***ಏಹೆ ! ಎಲೆ ವಿಚಾರಿ ಬಸವಾ :***

ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗದನುಪಮದ ವಿಚಾರಿ ಬಸವಾ. ನುಡಿಗೆಡೆಗೊಡದ ಘನದಿರುವಿನಲ್ಲಿ ಲಿಂಗ ಅಂಗವೆಂಬುದಿಲ್ಲ, ತಪ್ಪೆಂಬುದಿಲ್ಲ, ಒಪ್ಪೆಂಬು ದಿಲ್ಲ, ನಿಶಬ್ದ ಲಿಂಗಾನುಭವನದಲ್ಲಿ ಇಲ್ಲವೆಂಬುದು ಇಲ್ಲವಾದುದ ಬಲ್ಲನಾಗಿ ಉಂಟೆಂಬುದುಂಟೆನ ಬಲ್ಲವನಾದುದರಿಂದ ಮಾತಿಲ್ಲದವ ತಾನಾಗಿ ತನ್ನಿರುವ ಕಂಡುದರಿಂದ ಇಲ್ಲಿ ಮಾತನಳಿದು ಮಾತಿಲ್ಲದವನಾದ ಹರ್ಷೋದ್ಗಾರ ಏಹೆ ! ಎನಿಸಿತ್ತು. ತನ್ನಿರುವಾಗಿಹ ಘನವದು, ಮಾತನಳಿದು ಮಾತಿಲ್ಲದವನಾದ ವಿಚಾರಿ ಬಸವಾ ಎಂದು ಹೇಳಿಹಳು.

***ಎಲೆ ವಿಚಾರಿ ಬಸವಾ :***

ಮಾತನಳಿದು, ಮಾತಿಲ್ಲದ ತನ್ನಿರುವಾಗಿಹ ವಿಚಾರಿ ಬಸವಾ, ಮಾತಿಲ್ಲದ ತನ್ನಿರುವಾ ಗಿಹ ಅರಿಯಲಿಲ್ಲದ ಅರುವನರಿದು ವಿಚಾರಿ ಬಸವಾ, ಅರಿಯಲಿಲ್ಲದ ಮರೆಯಲಿಲ್ಲದ ವಿಚಾರಿ ಬಸವಾ, ನಿಜವೆನ್ನದೆ ನಿಜದಲ್ಲಿ ನಿಂದ ಮುಗ್ಧಾನುಭವಿಯಾಗಿಹ ವಿಚಾರಿ ಬಸವನಾ ದುದರಿಂದ ಎನ್ನ ಆಚಾರ ವಿಚಾರ ಬಸವಂಗರ್ಪಿತವಾಗಿ ಆನಂದದ ಆನಂದವಾಗಿಹ ಸುಖೈ ಕರಸದಲ್ಲಿ ಲೀಯವಾಗಿ ಏಹೆ ! ವಿಚಾರಿ ಬಸವಾ ಎಂದು ಹೇಳಿಹಳು.

***ಏಹೆ ! ಎಲೆ ಪರಿಣಾಮಿ ಬಸವ :***

ಬಸವ ಪ್ರಸಾದಿ ಪರಿಣಾಮಾನುಭಾವಿಯಾದ್ದರಿಂದ, ಎನ್ನ ಅಂತರಂಗ, ಬಹಿರಂಗ ಬಸವಂಗರ್ಪಿತ, ಶರಣಸತಿ ಲಿಂಗಪತಿ ಎಂಬುದು ಬಸವಣ್ಣಂಗೆ ನಿವೇದಿಸಿದೆನಾಗಿ ಉಭಯ

ವೆಂಬುದು ಇಲ್ಲವಾಗಿ ನಿರಾಲಂಬದಲ್ಲಿ ನಿಜನಿವಾಸವಾಗಿದ್ದೆ ಬಸವಾ.

ಬಸವ ಪ್ರಸಾದದ ಪರಿಣಾಮಾನುಭವಿಯಾದುದರಿಂದ, ಅವಿನಾಶಂಗೆ ವಿನಾಶವರ್ಜಿತ ವಾದರೆ ಪ್ರಸಾದಿ, ಆ ಪ್ರಸಾದ ವರ್ಣ ನಾಸ್ತಿಯಾಗಿ ಕೊಳಬಲ್ಲಡೆ ಪ್ರಸಾದಿ. ಆ ಪ್ರಸಾದಿ ಯೆಂಬ ಅವಿನಾಶಂಗೆ ನಮೋ ನಮೋ ಎನುತಿರ್ದೆನು.

ಬಸವಯ್ಯ ಪ್ರಸಾದ ಪರಿಣಾಮಾನುಭಾವಿಯಾದುದರಿಂದ ಅವಿನಾಶಂಗೆ ವಿನಾಶ ವರ್ಜಿತ ಮಾಡಿದ ಪ್ರಸಾದಿ. ಅವಿನಾಶವೆಂಬ ಬಸವಂಗೆ ಅರಿವ ಅರುಹಿಸಿಕೊಂಬ ಈ ಉಭಯ ವರ್ಣನಾಸ್ತಿಯಾಗಿ ಕೊಂಡ ಪ್ರಸಾದಿ, ಇತ್ತ ಅರುವು ಮರವೆಂಬ ಉಭಯ ಇಲ್ಲ ವಾಗಿ ಆಚಾರ ವಿಚಾರವೆಂಬ ಅಂತರಂಗ ಬಹಿರಂಗ ಇಲ್ಲವಾಗಿ ಇಲ್ಲವೆಂಬುದು ಇಲ್ಲವಾದು ದೆಂಬ ಬಲ್ಲವನಾಗಿ ಇದಲ್ಲದೆ ಉಂಟೆಂಬುದುಂಟೆಬುದು ಬಲ್ಲವನಾಗಿ ಅವಿನಾಶಿ ಪ್ರಸಾದಿ ಬಸವಯ್ಯನಾದುದರಿಂದ ಏಹೆ ! ಎಲೆ ಪರಿಣಾಮಿ ಬಸವಾ ಎಂದು ಕೊಂಡಾಡಿಹರು.

***ವಿಚಾರ ಸಂಗನನರಿದು ಹೇಳಲಿಲ್ಲವೆನಗೆ ಬಸವಾ*** :

ವಿಚಾರ ಸಂಗ, ತೆರಹಿಲ್ಲದ ಘನನಾಗಿಹ ಸಂಗ, ಸಂಗನೆನ್ನಲು ಅವಕಾಶ ಕೊಡದ ಘನವಾದುದರಿಂದ ತೆರಹಿಲ್ಲದ ಘನನೆಂದು ಹೇಳಿಹರು. ಇಂತಪ್ಪ ಶಬ್ದಮುಗ್ಧನಾಗಿಹ ತೆರಹಿ ಲ್ಲದ ಘನ ಸಂಗನ ವಿಚಾರವನರಿದು ಘನಕ್ಕೆ ಘನನಾಗಿ ಶಬ್ದಮುಗ್ಧನಾದುದರಿಂದ ಹೇಳಲಿಲ್ಲ ವೆನಗೆ ಎಂದು ಹೇಳಿಹರು.

***ಹೇ, ಹೇ ಎನಲೊಂದೆ ಸಂಗ ಸಂಗ, ನಿರಂಗ ನಿರಂಗ, ಬಸವ ಬಸವ ಬಯಲು*** :

ಬಸವನೆಂದರೆಖೂಯಲು; ಬಯಲೆಂದರೆ ನಿರಂಗ ನಿರಂಗ. ನಿರಂಗನಾದುದು ಅದು ಸಂಗ ಸಂಗ, ನಿರಂಗವಾದುದು ಅದು ಶಬ್ದ ಒಂದೆ. ಅಲ್ಲಿ ಶಬ್ದಕ್ಕೆ ತೆರಹಿಲ್ಲವಾಗಿ, ಆನಂದ ಮತ್ತಾನಂದನಾಗಿ ಹೇ ಹೇ ಎಂಬುದು ಆನಂದದಲ್ಲಿ ಲೀಯವಾಗಿ ಪರವಶದ ಉದ್ಗಾರ. ಈ ಪರವಶವಾದ ಹರ್ಷೋದ್ಗಾರ ನಿಃಶಬ್ದ ಲಿಂಗಾನುಭವನಾಗಿಹ ಹೇ ಹೇ ಎಂಬುದು ಪರವ ಶದ ಹರ್ಷೋದ್ಗಾರ. ಇಲ್ಲಿ ಸುನಾದವದು ಮುಗ್ಧಾನುಭವಿಯಾದ ಪ್ರಸಾದದ ಹರ್ಷೋದ್ಗಾರ ವಾಗಿ ಹೇ ಹೇ ಎನಲೊಂದೆ ಎಂದುದು ಸಂಗ ಸಂಗ ಎಂದುದು, ನಿರಂಗ ನಿರಂಗ ಎಂದುದು. ಬಸವಯ್ಯ ನಿರಂಗ. ಹೇ ಹೇ ಬಸವ ಬಸವ ಎಂದುದು ಅದು ಬಯಲೆ. ಏನೊಂದೆನ್ನದ ಮುನ್ನ ತಾನಾದ ಬಯಲು ಅದುವೆ, ತಾನಾದ ಅವಿನಾಶಿ ಪ್ರಸಾದವೆಂದು ಹೇಳಿಹರು.

# ತತ್ವವೆಂಬುದು ತನ್ನ ಬೆಳಗಿನ ಘನ

**ತತ್ವದ ಹಂಗೇನೊ ಶರಣ ಬಸವಂಗೆ?**
**ಭಕ್ತಿಯ ಹಂಗೇನೊ ಶರಣ ಬಸವಂಗೆ? ಮುಕ್ತಿಯ ಹಂಗೇನೊ**
**ಶರಣ ಬಸವಂಗೆ? ಇಹಪರ ಸಂಸಿದ್ಧಿ ಇಲ್ಲವಯ್ಯಾ,**
**ಸಂಗಯ್ಯಾ, ನಿಮ್ಮ ಶರಣ ಬಸವ ನಿರಾಭಾರಿಯಾದ ಬಳಿಕ.**

**ತಾತ್ಪರ್ಯ** : ***ತತ್ವದ ಹಂಗೇನೊ ? ಶರಣ ಬಸವಂಗೆ*** :

ಬಸವಯ್ಯ ತತ್ವದ ಹಂಗಿಗನಲ್ಲ. ಶರಣ ! ಏಕ ಏವ ದೇವನೊಬ್ಬನೆ ಶರಣ ಬಸವಯ್ಯನಾದುದರಿಂದ ತತ್ವ ಅತತ್ವವೆಂಬುದಕ್ಕೂ ಇವುಗಳ ಬೇರೆ ಬೇರೆ ಮಾಡುವ ವಿವೇಕಕ್ಕೂ ಮೀರಿದವನು. ಶರಣರು ಪರತತ್ವ ನಿಜ ಸಂಯುಕ್ತರು, ಆನು ನೀನೆನ್ನದಿಹ ಶಬ್ದಸುಖಿಗಳು. ಇವರು ತತ್ವ ಅತತ್ವವೆಂಬುವಲ್ಲಿಯೂ ಸಮದೃಷ್ಟಿಯುಳ್ಳವರು. ತನ್ನನ್ನು ಅಜಾತನಾಗಿ ಕಂಡವರು. ಪರತತ್ವವೆ ತನ್ನಿರವು ಆದವರು. ತತ್ವವೆಂಬುದು ಅವರಿಗೆ ಹೆತ್ತರಿವು ಆಗಿದೆ. ಅತತ್ವವೆಂಬ ನಾಮರೂಪ ಹುಸಿಯಾಗಿಹುದು. ಇದು ಇಲ್ಲದ ಹೆಸರುಳ್ಳ ಚಿತ್ತಾರವಾಗಿಹುದು. ತತ್ವವು ಅವರನ್ನು ಬೆಳಗಲಿಲ್ಲ, ತತ್ವಕ್ಕೆ ತಾನೆ ಬೆಳಗುಳ್ಳ ಘನವಾಗಿಹನು.

ತತ್ವವೆಂಬುದು ಗುರುಕಾರುಣ್ಯದಿಂದ ಲಭ್ಯವಾದುದು, ಅದು ಶೃತಿಯಿಂದುಕ್ತವು. ಶೃತಿಯು ತತ್ವಕ್ಕೆ ಸಾಕ್ಷಿ, ದೃಕ್, ಅಸಂಗ, ಆತ್ಮ, ಪರಮಾತ್ಮ ಕೂಟಸ್ಥ, ಸ್ವಯಂಪ್ರಕಾಶ, ಚೈತನ್ಯ, ಸತ್‌ಚಿತ್ ಆನಂದ, ನಿತ್ಯ, ಪೂರ್ಣವೆಂದು ಆತ್ಮ ಪರಮಾತ್ಮರ ಲಕ್ಷಣವನ್ನು ಸೂಚಿಸುತ್ತದೆ. ಇದು ಅರುವು ಭಾವವುಳ್ಳದ್ದಾಗಿ, ಬ್ರಹ್ಮಭಾವವುಳ್ಳದ್ದಾಗಿ, ಬ್ರಹ್ಮಕಾರವಾಗುವುದು. ಇದು ಅಸಂಗದ ಘನವ ಸೂಚಿಸುವುದು. ಸ್ವಯಂಪ್ರಕಾಶವೆಂಬ ಅರುವಿನ ಅಹಮತ್ವದಿಂದುಕ್ತವಾಗಿ ಚಿದಹಮ್ಮುಳ್ಳದೆನ್ನಿಸುವುದು. ಇದಲ್ಲದೆ ನುಡಿಗಣವುಳ್ಳದ್ದಾಗಿ ಶಬ್ದ ಸಂಭ್ರಮಕ್ಕೆ ಹೇತುವಾಗಿಹುದು. ಶಬ್ದ ಸಂಭ್ರಮದವರೆಲ್ಲ ಹಿಂದು ಗಾಣರು, ಮುಂದುಗಾಣರು, ತಮ್ಮ ತಾವರಿಯರು, ಮೂರು ಲೋಕವೆಲ್ಲವು ಬರುಸೂರೆ ಹೋಯಿತ್ತು ಗುಹೇಶ್ವರಾ.

ತತ್ವವದು, ಶಬ್ದಕ್ಕಿಂಬಾದಲ್ಲಿ ತಿಳಿಯುವುದೆಂತು ? ಆರಿಗೆ ಶಬ್ದವೆ ಮಹಾಘನವಾಗಿದೆ ಅದುವೆ ತನ್ನಿರುವು ಆಗಿದೆ. ಅವರಿಗೆ ತಾನಾರೆಂಬ ತನ್ನ ನಿಜದಿರುವಿನ ಹಿರಿಮೆ ಗೊತ್ತಾಗದು. ಶಬ್ದಸಂಭ್ರಮದಿಂದ ಶಾಸ್ತ್ರ ಹವ್ಯಾಸವು ಅಧಿಕವಾದಲ್ಲಿ ಅದರಿಂದ ತನ್ನ ಅಪೂರ್ವಿಕತನ ತಿಳಿಯದು.

ಶರಣನೆಂದರೆ ಸಮಸ್ವರೂಪವಾಗಿಹ ತತ್ವ ತಿಳಿದವರು. ಸಮತೆ ಸಯವಾದ ಶರಣಂಗೆ ಅರಿವು ಮರೆಯಲುಂಟೆ ? ಉಪಮೆ ನಿಸ್ಥಲವಾದ ಶರಣಂಗೆ ಶಬ್ದಸಂದಣಿಯುಂಟೆ ? ಅಖಂಡಿತ ಲಿಂಗಕ್ಕೆ ಅಪ್ರಮಾಣ ಶರಣಂಗೆ, ಸೀಮೆ ಸಂಬಂಧವೆಂಬ ಸಂಕಲ್ಪವುಂಟೆ ? ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣಂಗೆ ಭವವಿಲ್ಲ ಬಂಧನವಿಲ್ಲ.

ಸಮತೆಯೆ ತನ್ನಿರುವಾಗಿಹ ಶರಣನು ಅರಿವು ಮರೆಯಲುಂಟೆ ? ಇದು ತತ್ವ, ಇದು ಅತತ್ವವೆಂಬ ವಿಭಾಗದೃಷ್ಟಿಗೆ ನಿಲುಕದ ತಾನು ತನ್ನ ಸ್ವರೂಪವೆಂದರಿತವನು, ಅತತ್ವವ ಆಗದವನು. ತತ್ವವೆಂಬುದು ಆಗದವನು. ಏಕೆಂದರೆ ತಾನು ನುಡಿಗೆಡೆಗೊಡದ ಘನನು. ಕಾಣದುದ ಕಂಡು ತತ್ವ ಅತತ್ವವೆಂಬ ಉಭಯವ ನತಿಗಳೆದು, ಪರತತ್ವರೂಪಿ ಅಭೇದ್ಯ ನಿಲುವು, ನೆಲೆಯಿಲ್ಲದ ನಿಲುವು, ತೆರಹಿಲ್ಲದ ಪರಿಪೂರ್ಣವಾಗಿರುವ ತನ್ನಂ ಕಂಡುದರಿಂದ ತತ್ವದ ಹಂಗೇನೊ ಶರಣಬಸವಂಗೆ ಎಂದು ಹೇಳಿಹಳು.

ಉಪಮೆ ನಷ್ಟವಾದ ಶರಣಂಗೆ ಶಬ್ದ ಸಂದಣಿಯುಂಟೆ ? ಶಬ್ದವೆ ನಷ್ಟ ಮಾಡಿದ ನಿಶಬ್ಧವೇದಿ ಶರಣ ಉಪಮೆ ನಷ್ಟ ಮಾಡಿದ ಉಪಮಾತೀತ ಶರಣಂಗೆ, ಶೃತಿ ಪ್ರಮಾಣದ ಹಂಗಿಗನಾಗದ್ದರಿಂದ ಕಲ್ಪನಾರಹಿತನು. ಅಪ್ರಮಾಣನು ನಿಜದಿರುವಿನ ಎಚ್ಚರದಲ್ಲಿದ್ದವಂಗೆ ತತ್ವದ ಹಂಗೇನೊ ? ಶರಣ ಬಸವಂಗೆ ಎಂದು ಹೇಳಿಹಳು.

***ಭಕ್ತಿಯ ಹಂಗೇನೊ ? ಶರಣಬಸವಂಗೆ*** :

ಬಸವಯ್ಯ ಭಕ್ತಿಯ ಹಂಗಿಗನಲ್ಲ, ಕಲ್ಪಿತರು ಭಕ್ತಿಯ ಹಂಗಿಗರು. "ಬಿಟ್ಟು ಮಹೇಶನಾದೆನೆಂಬುದು ಅರುಹಿನ ಕೇಡು, ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು, ಬಿಡುವುದು ಹಿಡಿವುದು ಮನ ಕಲ್ಪಿತವಲ್ಲದೆ, ಕಲ್ಪನಾರಹಿತ ಭಕ್ತ ಮಹೇಶ್ವರರಲ್ಲಿಪ್ಪುದೇನಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನ."

ಭಕ್ತಿಯ ಹಂಗಿಗರು ಬಿಟ್ಟು ಮಹೇಶನಾದವನ ಹಿಡಿದು ಭಕ್ತರಾದವರು ಒಬ್ಬನು ನಿಜದ ಕೇಡುಳ್ಳವನಾದರೆ, ಇನ್ನೊಬ್ಬನು ಅರುವಿನ ಕೇಡುಳ್ಳವನು. ಇವರು ಮನನಷ್ಟ ಮಾಡಿದವರು. ಬೋಧನಷ್ಟ ಮಾಡದವರು. ಕಾರಣ ಕಲ್ಪನಾರಹಿತರಾಗದ್ದರಿಂದ ಹಂಗಿಗರು.

"ಭಕ್ತಂಗೆ ಉತ್ಪತ್ತಿ ಇಲ್ಲ, ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ, ಸ್ಥಿತಿ ಇಲ್ಲಾಗಿ ಲಯವಿಲ್ಲ, ಲಯವಿಲ್ಲಾಗಿ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿರ್ಪನು ಗುಹೇಶ್ವರಾ ನಿಮ್ಮ ಶರಣ ಬಸವಣ್ಣನು." ಮುನ್ನೆಲ್ಲಿಂದ ಬಂದಹೋಗಿನಲ್ಲಿಗೆ ನಿತ್ಯನಾಗಿರ್ಪ ಶರಣನಾದುದರಿಂದ ಭಕ್ತಿಯ ಹಂಗಿಗನಲ್ಲ, ಕಾರಣ, ಭಕ್ತಿ ಹಂಗೇನೊ ಶರಣ ಬಸವಂಗೆ ಎಂದು ಹೇಳಿಹಳು.

***ಮುಕ್ತಿಯ ಹಂಗೇನೊ ಶರಣಬಸವಂಗೆ :***

ಮುಕ್ತಂಗೆ, ಮುಕ್ತಿಯ ಹಂಗೇನೊ ? ಆವನು ಬಂಧನದಿಂದುಕ್ತನು, ಅವನಲ್ಲಿ ಬಿಡುಗಡೆಯ ಅಪೇಕ್ಷೆಯು ಸಹಜ. ಶರಣಂಗೆ ಭವವಿಲ್ಲ, ಬಂಧನವಿಲ್ಲದಿರುವಾಗ ಮುಕ್ತಿಯ ಹಂಗೆಲ್ಲಿಯದು? ಅಖಂಡಿತ ಲಿಂಗಕ್ಕೆ ಅಪ್ರಮಾಣ ಶರಣಂಗೆ ಸೀಮೆ ಸಂಬಂಧವೆಂಬ ಸಂಕಲ್ಪವುಂಟೆ ? ಶರಣ ಲಿಂಗಕ್ಕೆ ಲಿಂಗವಾಗಿಹ ಲಿಂಗ ಪ್ರಸಾದ ಕೊಂಡುದರಿಂದ ಸ್ವಯಲಿಂಗಿ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನ ನಿಲುವು ತನ್ನದಾದುದರಿಂದ ಅಪ್ರಮಾಣ ಶರಣನು. ಶಗಣನ ದಿವ್ಯದೃಷ್ಟಿಯಲ್ಲಿ ಅಖಂಡಿತ ಲಿಂಗ ಬೇರೆ, ತಾನು ಬೇರೆಂಬ ವಿಭಾಗ ದೃಷ್ಟಿಯಿಲ್ಲ, ಅಖಂಡಿತನ ನಿಲುವು ತನ್ನದಾದುದರಿಂದ ಅಖಂಡಿತ ಲಿಂಗ ತಾನೆ, ಅಪ್ರಮಾಣ ಶರಣ ತಾನೆ ಆಗಿರುವಲ್ಲಿ ಭವವಿಲ್ಲ, ಭವವಿಲ್ಲವಾದ್ದರಿಂದ ಬಂಧನವು ಇಲ್ಲ, ಬಂಧನ ಇಲ್ಲವಾದ್ದರಿಂದ ಮುಕ್ತಿಯ ಹಂಗೂ ಇಲ್ಲ ಶರಣಂಗೆ ಎಂದು ಹೇಳಿಹಳು.

**ಇಹಪರ ಸಂಸಿದ್ಧಿ ಇಲ್ಲವಯ್ಯ :**

ಶರಣಂಗೆ ಪ್ರವೃತ್ತರೂಪವಾಗಿಹ ಸಂಸಾರ ಸಂಗವೂ ಇಲ್ಲ, ಇತ್ತ ನಿವೃತ್ತ ಪರವಾಗಿಹ ಪರಮಾರ್ಥ ರೂಪಿ ಪುರುಷಾರ್ಥ ಸಂಗವೂ ಇಲ್ಲ, ಶರಣ ಸಂಗವಳಿದ ಮಹಾಂತ, ಅಸಂಗವಳಿದ ಮಹಾಂತ, ಸಾಕಾರವಳಿದ ಮಹಾಂತ, ನಿರಾಕಾರವಳಿದ ಮಹಾಂತ, ಸಂಗ ನಿಸ್ಸಂಗ ಸೇರದ ನಿರುಪಮನಾದುದರಿಂದ ಇಹಪರ ಸಂಸಿದ್ಧಿ ಇಲ್ಲವಯ್ಯ ಎಂದು ಹೇಳಿಹರು.

***ಸಂಗಯ್ಯ, ನಿಮ್ಮ ಶರಣ ಬಸವ ನಿರಾಭಾರಿಯಾದ ಬಳಿಕ :***

ತೆರಹಿಲ್ಲದ ಘನವಾಗಿಹ ಸಂಗಯ್ಯ ಭರಿತ ಲಿಂಗವೆಂಬುದಕ್ಕೂ ಅವಕಾಶಕೊಡದ ಸ್ವಯಲಿಂಗ ತನ್ನ ಸ್ವಸ್ವರೂಪವಾದುದರಿಂದ ಅಹಮಿಲ್ಲದ ಚಿದ್ಘನ ಶರಣ ಬಸವನಾದುದರಿಂದ ನಿಮ್ಮ ಶರಣ ಸಂಗಯ್ಯ, ಬಸವ ನಿರಾಭಾರಿಯಾದ ಬಳಿಕ ಎಂದು ಹೇಳಿಹಳು.

# ಅಂಗಸಂಗಿಗನಲ್ಲದ ಅರಿವು

**ನಮ್ಮ ಹಂಗಿಗನಲ್ಲ ಬಸವಯ್ಯನು.**

ನಮ್ಮ ಸಂಗಿಗನಲ್ಲ ಬಸವಯ್ಯನು.
ನಮ್ಮ ಇರದವನಲ್ಲ ಬಸವಯ್ಯನು.
ನಮ್ಮ ಪರದವನಲ್ಲ ಬಸವಯ್ಯನು.
ಪ್ರಸಾದವೇದ್ಯ ಶರಣ ಬಸವಯ್ಯನು.
ಪ್ರಸನ್ನ ಕಾಯವಾದನಯ್ಯ ಸಂಗಯ್ಯ.

**ತಾತ್ಪರ್ಯ : *ನಮ್ಮ ಹಂಗಿಗನಲ್ಲ ಬಸವಯ್ಯನು* :**

ಲಿಂಗಕ್ಕೆ ಲಿಂಗವಾಗಿಹ ಲಿಂಗ ಪ್ರಸಾದಕೊಂಡ ಮಹಾಂತ ಸ್ವಯ ಲಿಂಗಿಯಾಗಿರುವುದರಿಂದ ಗುರುವಿನ ಹಂಗಿಗನಲ್ಲ, ಲಿಂಗದ ಹಂಗಿಗನಲ್ಲ, ಜಂಗಮದ ಹಂಗಿಗನಲ್ಲ, ಆವಾವ ಹಂಗಿಗನಲ್ಲ, "ಅಂಡಜ ವಳಿದ ಬಸವ, ಪಿಂಡಜ ವಳಿದ ಬಸವ, ಸಾಕಾರ ವಳಿದ ಬಸವ, ನಿರಾಕಾರವಳಿದ ಬಸವ, ಸಂಗವಳಿದ ಬಸವ, ನಿಸ್ಸಂಗವಳಿದ ಬಸವ, ಸಂಗಯ್ಯನಲ್ಲಿ ಸ್ವಯ ಲಿಂಗಿಯಾದ ಬಳಿಕ."

ಬಸವಯ್ಯ ಸ್ವಯ ಲಿಂಗಿಯಾದುದರಿಂದ ನಮ್ಮ ಹಂಗಿಗನಲ್ಲ, ನಿರುಪಾಧಿ ನಿರಾಲಂಬ ನಿಜೈಕ್ಯ ನಿರಂತರವಾಗಿಹ ಸರ್ವಮಂಗಲಮಯ ಪರಮಸತ್ ಸ್ವರೂಪಿ ಸ್ವಯ ಲಿಂಗಿಯಾದುದರಿಂದ ಆವಾವ ವರ್ಣಾಶ್ರಮಂಗಳ ಹಂಗಿಗನಲ್ಲ, ಇತ್ತ ನಾಹಂ, ಕೋಹಂ, ಸೋಹಂ, ಚಿದಹಂ, ದಾಸೋಹಂ ಇವಾವುಗಳ ಹಂಗಿಗನಲ್ಲ, ತಾನು ಇದಿರೆಂಬ ಮತಿಯ ಹಂಗಿಗನಲ್ಲ, ನನ್ನವರೆಂಬ ಹಂಗಿಗನಲ್ಲ, ಅನ್ಯರ ಹಂಗಿಗನಲ್ಲ, ಶರಣಸತಿಯೆಂಬ ಹಂಗಿಗನಲ್ಲ, ಲಿಂಗಪತಿಯೆಂಬ ಹಂಗಿಗನಲ್ಲ, ನುಡಿಯ ಹಂಗಿಗನಲ್ಲ, ನಡೆಯ ಹಂಗಿಗನಲ್ಲವಾದ್ದರಿಂದ ನಮ್ಮ ಹಂಗಿಗನಲ್ಲ ಎಂದು ಹೇಳಿಹರು.

***ನಮ್ಮ ಸಂಗಿಗನಲ್ಲ ಬಸವಯ್ಯ* :**

ಬಸವಯ್ಯ ಈ ಮಹಾಂತ ಸಂಗನ ಬಸವ, ಸಂಗನ ಕೂಟಕ್ಕೆ ತೆರಹಿಲ್ಲದುದು, ಆ ಸಂಗನ ಕೂಟಕ್ಕೆ ತೆರಹಿಲ್ಲದ ಕಾರಣ ಬಸವನ ಇರುವಿಂಗೆ ನೆಲೆಯಿಲ್ಲ, ಬಸವಯ್ಯ ಪರಿಪೂರ್ಣನಲ್ಲ, ಪ್ರಾದೇಶಿಕನಲ್ಲ, ನಿರತಿಶಯ ದೊಳಗತಿಶಯ ತಾ ಮುನ್ನಲ್ಲ, ಶರಣನಲ್ಲ, ಐಕ್ಯನಲ್ಲ, ಪರಮನಲ್ಲ, ಜೀವನಲ್ಲ, ನಿರವಯನಲ್ಲ, ಸಾವಯವನಲ್ಲ, ಪರವಿಹವೆಂಬುಭಯದೊಳಿಲ್ಲದವನು ನಿರಾಲಂಬ ನಿಜಗುರು ಶಾಂತೇಶ್ವರನ ಶರಣನ ನಿಲುವು, ಉಪಮೆಗೆ ತಾನನುಪಮ.

ಬಸವಯ್ಯನ ಇರವು, ಉಪಮೆಗೆ ಮೀರಿದ ತಾನನುಪಮವಾಗಿಹ ಇರವು. ಪ್ರಪಂಚ ಸತ್ಯವೆಂಬುವರ ಇರುವಿನವನಲ್ಲ, ಪ್ರಪಂಚ ಮಿಥ್ಯೆವೆಂಬುವರ ಇರುವಿನವನಲ್ಲ, ಪರಮಾರ್ಥ ಸತ್ಯವೆಂಬುವವರ ಇರುವಿನವನಲ್ಲ, ಪರಮಾರ್ಥ ಮಿಥ್ಯೆವೆಂಬುವವರ ಇರುವಿನವನಲ್ಲ, ಆವಾವ ಇರುವಿನವನಲ್ಲವಾದ್ದರಿಂದ ನಮ್ಮ ಸಂಗಿಗನಲ್ಲ ಬಸವಯ್ಯ ಎಂದು ಹೇಳಿಹಳು.

ನಮ್ಮ ಇರದವನಲ್ಲ ಬಸವಯ್ಯ, ನಮ್ಮ ಪರದವನಲ್ಲ ಬಸವಯ್ಯ, ಸಮತಾನಿಧಿ ಬಸವಯ್ಯ, ನುಡಿಗೆಡೆಗೊಡದ ಘನನಾದುದರಿಂದ ಸಾವಯವನಾಗಿದ್ದರಿಂದ ನಮ್ಮ ಇರದವನಲ್ಲ ಬಸವಯ್ಯ. ನಿರವಯನಾಗಿದ್ದರಿಂದ ನಮ್ಮ ಪರದವನಲ್ಲ ಬಸವಯ್ಯನು ಎಂದು ಹೇಳಿಹಳು. ಇದಲ್ಲದೆ ಸಂಗದ ಸಂಗಿಗನಾಗದ್ದರಿಂದ ನಮ್ಮ ಇರದವನಲ್ಲ, ಅಸಂಗದ ಸಂಗಿಗನಾಗದ್ದರಿಂದ

ನಮ್ಮ ಪರದವನಲ್ಲ ಬಸವಯ್ಯ. ಇತ್ತ ನಾಮರೂಪದ ಸಂಗಿಗನಲ್ಲ ಬಸವಯ್ಯ. ಇತ್ತ ಅಸ್ತಿ, ಭಾತಿ ಎಂಬ ಸಚಿದ್ರೂಪ ನಾನು ಎಂಬ ನಿರೂಪದ ಸಂಗಿಯಲ್ಲ, ಬಸವನ ಕೂಟಕ್ಕೆ ತೆರಹಿಲ್ಲದ ಕಾರಣ ನಿರಾಲಂಬ ನಿಜಗುರು, ಶಾಂತೇಶ್ವರ ಶರಣನ ನಿಲುವು ಉಪಮೆಗೆ ತಾನನುಪಮವೆಂದು ಹೇಳಿಹರು.

**ಪ್ರಸಾದವೇದ್ಯ ಶರಣ ಬಸವಯ್ಯನು :**

"ಬಸವಯ್ಯಂಗೆ ಶುದ್ಧ ಪ್ರಸಾದವು ವೇದ್ಯ, ಸಿದ್ಧ ಪ್ರಸಾದ ವೇದ್ಯ, ಪ್ರಸಿದ್ಧ ಪ್ರಸಾದ ವೇದ್ಯ, ಶರಣಬಸವಯ್ಯ ಅವಿನಾಶಂಗೆ ವಿನಾಶವರ್ಜಿತವಾದಡೆ ಪ್ರಸಾದಿ, ಆ ಪ್ರಸಾದವ ವರ್ಣನಾಸ್ತಿಯಾಗಿ ಕೊಳಬಲ್ಲಡೆ ಪ್ರಸಾದಿ ಆ ಪ್ರಸಾದಿಯೆಂಬ ಅವಿನಾಶಂಗೆ ನಮೋ ನಮೋ ಎಂಬೆ ಕೂಡಲ ಚೆನ್ನಸಂಗಮದೇವಾ."

ಪ್ರಸಾದ ಬಲ್ಲ ಶರಣ ಬಸವಣ್ಣ, ಗುರುವಿಂಗೆ ಗುರು ಪ್ರಸಾದ ಕೊಂಡುದರಿಂದ ಶುದ್ಧಪ್ರಸಾದ ವೇದ್ಯ ಶರಣ. ಲಿಂಗಕ್ಕೆ ಲಿಂಗವಾಗಿಹ ಲಿಂಗ ಪ್ರಸಾದ ಕೊಂಡುದರಿಂದ ಸಿದ್ಧ ಪ್ರಸಾದ ವೇದ್ಯ ಶರಣ ಬಸವಯ್ಯನು. ಜಂಗಮಕ್ಕೆ ಜಂಗಮವಾಗಿಹ ಜಂಗಮ ಪ್ರಸಾದ ಕೊಂಡುದರಿಂದ ಪ್ರಸಿದ್ಧ ಪ್ರಸಾದ ವೇದ್ಯ ಶರಣ ಬಸವಯ್ಯನು. ಗುರುಲಿಂಗದುದಯದಿಂದ ಶುದ್ಧಪ್ರಸಾದ ವೇದ್ಯವಾದುದು, ಸ್ವಯಲಿಂಗದುದಯದಿಂದ ಸಿದ್ದಪ್ರಸಾದವಾದುದು,ನಿರ್ನಾಮ ಜಂಗಮಲಿಂಗ, ನಿರ್ಲಿಖಿತ ಜಂಗಮ ಲಿಂಗದುದಯದಿಂದ ಪ್ರಸಿದ್ಧ ಪ್ರಸಾದ ವೇದ್ಯವಾದುದು, ಈ ಮೂರು ತನ್ನಂತರಂಗದೊಳಕಂಡ ನಿಕ್ಷೇಪವು. ಈ ನಿಕ್ಷೇಪದ ರಹಸ್ಯವರಿತುದರಿಂದ ತ್ರಿವಿಧ ಪ್ರಸಾದ ವೇದ್ಯ ಶರಣ ಬಸವಯ್ಯ ಎಂದು ಹೇಳಿಹಳು.

**ಪ್ರಸನ್ನಕಾಯವಾದನಯ್ಯ ಸಂಗಯ್ಯ :**

ಅರಿತ ಶರಣ ಕಾಯ ಸಂಗಯ್ಯನಲ್ಲಿ ಪ್ರಸನ್ನ ಕಾಯವಾದುದು, ಪ್ರಸನ್ನಕಾಯವಾದವರು ಆರು ? ಸಂಗಯ್ಯನ ಕಾಯ, ಅದು ಪ್ರಸನ್ನ ಪ್ರಸಾದ ಕಾಯ, ಸಂಗನ ನೋಡ ಹೋಗಿ ಸಂಗನೆನ್ನದೆ, ತಾನೆನ್ನದೆ, ಅರುವಿಂಗರುವಾದುದೆ ಪ್ರಸನ್ನ ಕಾಯವಾದ ಬಸವಯ್ಯ, ಬಸವರಸ ಬಸವ ಪ್ರಭುವಿನ ಕಾಯ ಪ್ರಸನ್ನ ಕಾಯ, ಇಂತಪ್ಪ ಕಾಯ, ಘನಕ್ಕೆ ಘನವಾಗಿಹ ತನ್ನಿರುವು ಇದು ಕಾರಣ, ಪ್ರಸನ್ನ ಕಾಯವಾದನಯ್ಯ ಸಂಗಯ್ಯನೆಂದು ಹೇಳಿಹರು.

ಸಂಗನ ಅರಿತಲ್ಲಿ ಎಲ್ಲಿ ನೋಡಿದಲ್ಲಲ್ಲಿ ಸಂಗ, ಸಂಗನೆನ್ನದ ಸಂಗ ಶಬ್ದ ಮುಗ್ಧ ಸಂಗ, ಸಂಗನ ಕಂಡವಂಗೆ ಅನ್ಯ ಕಾಣಲಿಲ್ಲ, ಅನ್ಯ ಕಂಡವಂಗೆ ಸಂಗನ ಕಾಣಲಿಲ್ಲ, ಸಂಗ ! ಆಶ್ಚರ್ಯ ಮಹಾದಾಶ್ಚರ್ಯ ಸಂಗಿಗಳ ಕಾಣಲಿಲ್ಲ, ಅಸಂಗಿಗಳು ಕಾಣಲಿಲ್ಲ, ಬಿಟ್ಟವರು ಕಾಣಲಿಲ್ಲ, ಹಿಡಿದವರು ಕಾಣಲಿಲ್ಲ, ಸಂಗನ ಕಂಡವರು ಸಂಗನೆ ತಾನಾಗಿ ಸಂಗನ ಇರುವಿನಲ್ಲಿ ಪರವಶವಾಗಿ ಪ್ರಸನ್ನ ಕಾಯವಾದರಯ್ಯ ಎಂದು ಹೇಳಿಹರು. ಸಂಗ ! ತಾನೆ ಸಂಗ, ಸಂಗ ಏಕ ಏವ ದೇವನೊಬ್ಬನೆ, ಸಂಗಯ್ಯನ ಇರುವೆ ಪ್ರಸನ್ನ ಕಾಯವಾಯಿತ್ತು ಎಂದು ಹೇಳಿಹರು.

# ಸ್ಥಳ ನಿಸ್ಥಲವೆನ್ನದ ಕುರುಹಿಲ್ಲದ ಅರಿವು

ಪ್ರಣವದ ಹೆಸರಿಲ್ಲ ಬಸವಂಗೆ,
ಪ್ರಣವದ ಕುರುಹಿಲ್ಲ ಬಸವಂಗೆ,

ಪ್ರಣವದ ನೆಲೆಯಿಲ್ಲ ಬಸವಂಗೆ,
ಪ್ರಣವದ ರೂಪಿಲ್ಲ ಬಸವಂಗೆ,
ಪ್ರಣವವ ನೋದಿ ಓದಲಿಲ್ಲ ಬಸವಂಗೆ,
ಪ್ರಣವಕ್ಕೆ ಅಪ್ರಮಾಣನಾದ ನಮ್ಮ ಬಸವಯ್ಯನು ಸಂಗಯ್ಯ.

**ತಾತ್ಪರ್ಯ : ಪ್ರಣವದ ಹೆಸರಿಲ್ಲ ಬಸವಂಗೆ :**

ಬಸವಯ್ಯನನ್ನು ತಿಳಿದವರು ಬಸವಾದಿ ಪ್ರಮಥರು. ಅವರು ಸ್ಥಲವೆನ್ನದವರು, ನಿಸ್ಥಲವೆನ್ನದವರು. ತಾನಾರೆಂಬ ನಿರ್ಣಯ ತನಗಾದವರು ಏನೊಂದು ಅರಿಯದವರು ಲಿಂಗೈಕ್ಯ ಎನ್ನದವರು. ಇಂತಪ್ಪ ಅಪರಮಿತ ಜ್ಞಾನಿಗಳ ತಿಳಿದವರಲ್ಲಿ ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನು ಶರಣ-ಶರಣೆಯರು ತಿಳಿದವರು. "ಇದ್ದಲದೆ ಓದಿದ ವೇದವ ನೋದಿದವರು ತಿಳಿಯಲಿಲ್ಲ. ಸಾಧಿಸಿದ ಶಾಸ್ತ್ರವನೋದಿದವರು ತಿಳಿಯಲಿಲ್ಲ. ಮುನ್ನ ಮುನ್ನಲಾದ ಘನವು ತನ್ನಿಂದ ತಾನಾದ ಸ್ವಪ್ರಭೆಯ ಅದೆಂತು ತಿಳಿವುದು. ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದೆನಯ್ಯ. ಒಂದನಂತ ಕಾಲ ಮಹವು ಮಹದಾನಂದಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದುದು ಒಂದನಂತ ಕೋಟಿ ವರ್ಷ, ಕೂಡಲಚೆನ್ನಸಂಗಯ್ಯ ವಿಪರೀತ ಚಾರಿತ್ರ್ಯ."

ಬಸವರಸರ ಚಾರಿತ್ರ್ಯ, ವಿಪರೀತ ಚಾರಿತ್ರ್ಯ, ನಿಮ್ಮಿಂದ ನೀವೆ ಆಗಿಹ ಸ್ವಯಂಭು, ನಿಮ್ಮ ಮಹಾಕಾಲದ ನಿರ್ಣಯ ಅದಾರು ವರ್ಣಿಸುವುದು. ಉದಯಾಸ್ತಗಳಿಲ್ಲದ ಸ್ವತೇಜಕ್ಕೆ ಆದಿ ಆವುದು, ಮಧ್ಯವಾವುದು, ಅಂತ್ಯ ಆವುದು, ನಿರವಧಿಯ ನಿಲುವು ನೆಲೆಯಿಲ್ಲದ ನಿಲುವು, ಅನಂತಂಗೆ ಸ್ವೀಕರಿಸಿದುದು ಆವುದು, ತ್ಯಜಿಸಿದುದಾವುದು, ನಷ್ಟವಾದುದಾವುದು ? ಅಂದು ಇಂದು ಎಂದೆಂದು ಇದ್ದಂತಿದ್ದ ಸ್ವತೇಜ ಸ್ವಮಹಿಮಂಗೆ ಏನನ್ನಬೇಕು.

"ಬಸವಣ್ಣಾ ಓಂಕಾರದಿಂದತ್ತತ್ತ ನೀನೆ, ನಾದ ಬಿಂದು ಕಲೆಗಳಿಂದತ್ತತ್ತ ನೀನೆ, ಪ್ರಥಮಾಚಾರ್ಯ ನೀನೆ, ಲಿಂಗಾಚಾರ್ಯ ನೀನೆ, ಜಂಗಮಾಚಾರ್ಯ ನೀನೆ, ಪ್ರಸಾದಾಚಾರ್ಯ ನೀನೆ, ಗತಿಮತಿಯಾಗಿ ಎನ್ನನುಳುಹಿದ ಕಾರಣ ಆವ ವರ್ಣವಿಲ್ಲದುದು ಓಂ ನಮಃ ಶಿವಾಯ ಎನುತಿರ್ದೆನು."

ಓಂಕಾರದಿಂದತ್ತತ್ತನಾದ ಬಸವಣ್ಣ ನಿರ್ನಾಮಿ, ನಿರ್ನಾಮಿಯಾದುದರಿಂದ ಪ್ರಣವದ ಹೆಸರಿಲ್ಲ, ಪ್ರಣವದಿಂದ ಬಸವಯ್ಯನುದಯವಾದುದಿಲ್ಲ, ಬಸವಣ್ಣನ ಕಾರುಣ್ಯದಿಂದ ಪ್ರಣವದ ಪ್ರಾಧಾನ್ಯವು ಪ್ರಣವವದು ಪ್ರಮಾಣವು. ಪ್ರಣವದರ್ಥವದು ಪ್ರಮಾಣವದು, ಬಸವಣ್ಣ ಓಂಕಾರದಿಂದತ್ತತ್ತ ಆಗಿರುವಲ್ಲಿ ನುಡಿಗೆಡೆಗೊಡದ ಘನವಾಗಿಹ ಬಸವಣ್ಣನಿರುವಲ್ಲಿ ಪ್ರಣವದ ಹೆಸರಿಲ್ಲ ಬಸವಂಗೆ ಎಂದು ಹೇಳಿಹಳು.

**ಪ್ರಣವದ ಕುರುಹಿಲ್ಲ ಬಸವಂಗೆ :**

ಬಸವಪ್ರಭು, "ಆದಿಯು ಅಲ್ಲ, ಅನಾದಿಯು ಅಲ್ಲ, ಆದಿಯೆಂದಲ್ಲಿ ಕುರುಹಿಂಗೆ ಬಂದಿತ್ತು. ಅನಾದಿಯೆಂದಲ್ಲಿ ಶಬ್ದಕ್ಕೆ ಬಂದಿತ್ತು." ಬಸವದೇವ ನಿಃಶಬ್ದವೇದಿ, ಬಸವಯ್ಯ ಬಯಲಾನುಭವಿ, ಸನ್ಮಾತ್ರ ಬಸವ, ಚಿನ್ಮಾತ್ರ ಬಸವ, ಭರಿತ ಬಸವ, ನಿರ್ಭರಿತ ಬಸವ, ಲಿಂಗಕ್ಕೆ ಲಿಂಗವಾಗಿಹ ಸ್ವಲಿಂಗೆಗೆ ಅದಾವ ಕುರುಹು ? ಕಣ್ಣಿನ ಕಣ್ಣಾದವಂಗೆ ಅದಾವ ಕಣ್ಣು ಕಾಣುವದು. ಇದು ಕಾರಣ ಪ್ರಣವದ ಕುರುಹಿಲ್ಲ ಬಸವಂಗೆ ಎಂದು ಹೇಳಿಹಳು.

**ಪ್ರಣವದ ನೆಲೆಯಿಲ್ಲ ಬಸವಂಗೆ** :

ಆವುದು ಬುದ್ಧಿಯಿಂದುಕ್ತವು, ಅದು ಮನದ ನೆನಹಿನಿಂದುಕ್ತವು, ಅದು ಪ್ರವೃತ್ತಿಯುಳ್ಳದ್ದಾಗಿರಲಿ, ನಿವೃತ್ತಿವುಳ್ಳದ್ದಾಗಿರಲಿ ಅದು ನೆಲೆಯುಳ್ಳದ್ದಾಗಿಹುದು. ಆವುದು ಅರಿವ ಅರುಹಿಸಿಕೊಂಬುದಾಗಿದೆ ಅದು ನೆಲೆಯುಳ್ಳದ್ದಾಗಿಹುದು. ಬಸವದೇವ ಅರಿವ ಅರುಹಿಸಿಕೊಂಬ ಈ ಉಭಯ ನಷ್ಟಮಾಡಿದ ಅಭೇದ್ಯ, ಅರಿಯಲಿಲ್ಲ ಅರುವು ಅವಗ್ರಹಿಸಿದಾತಂಗೆ ಅರಿಯುವುದಿಲ್ಲ, ಮರೆಯುವುದೂ ಇಲ್ಲ, ಅರಿಯದವಂಗೆ ಮರೆಯದವಂಗೆ ಅದಾವ ನೆಲೆಯಾಗಬೇಕು. ನೆಲೆಯಿಲ್ಲದ ನಿಲುವುಳ್ಳವಂಗೆ ಅದಾವ ನೆಲೆಯಾಗಬೇಕು. ಪ್ರಣವವದು ಪ್ರಮಾಣದ ನೆಲೆಯು, ಪ್ರಮಾಣವೆ ನಷ್ಟವಾದವಂಗೆ ಅದಾವ ಪ್ರಣವದ ನೆಲೆಯಾಗಬೇಕು. ಇದು ಕಾರಣ ಪ್ರಣವದ ನೆಲೆಯಿಲ್ಲ ಬಸವಂಗೆ ಎಂದು ಹೇಳಿಹಳು.

**ಪ್ರಣವದ ರೂಹಿಲ್ಲ ಬಸವಂಗೆ** :

ಪ್ರಣವದ ಸಂಕೇತವೂ ಇಲ್ಲ ಬಸವಂಗೆ, ಒಳಹೊರಗೆನ್ನದೆ ಭರಿತವಾಗಿಹ ಮಹಾಮಹಿಮಂಗೆ ಅದೇತರ ರೂಹು ಅದೇತರ ರೂಪ, ಅದೇತರ ಅರೂಪ, ದೇವಗಣ ರೂಹಿಲ್ಲ ಬಸವಂಗೆ, ರುದ್ರಗಣರ ರೂಹಿಲ್ಲ, ಪ್ರಮಥಗಣರ ರೂಹು ಇಲ್ಲವಾದುದರಿಂದ ಪ್ರಣವದ ರೂಹಿಲ್ಲ ಬಸವಂಗೆ ಎಂದು ಹೇಳಿಹಳು.

**ಪ್ರಣವವನೋದಿ ಓದಲಿಲ್ಲ ಬಸವಂಗೆ** :

ಬಸವನ ತಿಳಿಯಲು ಪ್ರಣವವನೋದಿ ಓದಲಿಲ್ಲ, ಪ್ರಣವದ ಓದು, ಪೂರ್ಣದ ಓದು ಅಖಂಡದ ಓದು ಕಲ್ಪಿತನ ಮುಕ್ತಾಯದ ಓದು, ಇದು ಅರುವಿನ ಓದು, ಚೈತನ್ಯದ ಓದು, ಸಚ್ಚಿದಾನಂದದ ಓದು, ಜ್ಞಾನಸ್ವರೂಪದ ಓದು, ಇದು ಕೊನೆ ಮೊದಲಿಲ್ಲದ ಓದು. ಈ ಓದಿನಲ್ಲಿ ಕರ್ಮಕಾಂಡವನರಿಯೆ, ಉಪಾಸನಾ ಕಾಂಡವನರಿಯೆ, ಜ್ಞಾನಕಾಂಡವನರಿಯೆ, ಇದು ತೆರಹಿಲ್ಲದ ಲಿಂಗ ಭರಿತವಾಗಿಹ ಓದು, ಇಂತಪ್ಪ ಅಖಂಡನ ಓದಹೋಗಿ, ಅಖಂಡನೆಂದು ಓದಲಿಲ್ಲ, ಪೂರ್ಣನೆಂದು ಓದಲಿಲ್ಲ, ಓಂ ಎಂದು ಓದಲಿಲ್ಲ, ಪ್ರಣವವೆಂದು ಓದಲಿಲ್ಲ, ಓದಲಿಲ್ಲವಾದ್ದರಿಂದ ತೆರಹಿಲ್ಲದ ನಡೆ, ತೆರಹಿಲ್ಲದ ನುಡಿಯಾದುದರಿಂದ ಪ್ರಣವವ ಓದಿ ಓದಲಿಲ್ಲವೆಂದು ಹೇಳಿಹಳು.

**ಪ್ರಣವಕ್ಕೆ ಅಪ್ರಮಾಣನಾದ ನಮ್ಮ ಬಸವಯ್ಯನು ಸಂಗಯ್ಯ** :

ಪ್ರಣವವೆಂಬುದು ಪ್ರಮಾಣವು. ನುಡಿಗೊಳಪಟ್ಟುದು, ಅಪ್ರಮಾಣವೆಂಬ ಮಹವ ನುಡಿಗೆ ತಂದವನಾರು ? ಅಪ್ರಮಾಣವದು ಶಬ್ದವೆ ಮೀಸಲವಾಗಿಹ ಇರವು. ಮಾತಿಲ್ಲದವನು ಅವನೆ, ಅಪ್ರಮಾಣನು. ನುಡಿಗೆಡೆಗೊಡದ ಘನನೆ ಅಪ್ರಮಾಣನು ನಮ್ಮ ಬಸವಯ್ಯನು ಸಂಗಯ್ಯನು ಎಂದು ಹೇಳಿಹಳು.

# ಶಬ್ಧ ನಷ್ಟವಾಗುವುದೆ ಭಕ್ತಿ ಪ್ರಸಾದ

**ಭಕ್ತಿ ಪ್ರಸಾದ, ಮುಕ್ತಿ ಪ್ರಸಾದ,**
**ಇರಪರ ಪ್ರಸಾದದ ನೆಲೆಯ ಕಂಡು ಸುಖಿಸಿದೆವೆಂಬರು.**
**ತಾವರಿಯದ ವಿವರ ತಮಗೆಲ್ಲಿಯದೊ ?**

ಸಂಗಯ್ಯನಲ್ಲಿ ಬಸವ ಕಾಯರಹಿತನಲ್ಲದೆ ಮತ್ತಾರನೂ ಕಾಣೆನಯ್ಯ.

**ತಾತ್ಪರ್ಯ : ಭಕ್ತಿ ಪ್ರಸಾದ ಮುಕ್ತಿ ಪ್ರಸಾದ ಇರಪರ ಪ್ರಸಾದವ ನೆಲೆಯ ಕಂಡು ಸುಖಿಸಿದೆವೆಂಬರು ತಾವರಿಯದ ವಿವರ ತಮಗೆಲ್ಲಿಯದೊ ? :**

ಭಕ್ತಿ ಪ್ರಸಾದ, ಇದಾರ ಭಕ್ತಿ ಪ್ರಸಾದ ? ಇದು ಭೇದ ಜ್ಞಾನಿಗಳ ಭಕ್ತಿಪ್ರಸಾದ. ಮುಕ್ತಿ ಪ್ರಸಾದ, ಇದಾರ ಮುಕ್ತಿ ಪ್ರಸಾದ ಭೇದ ಜ್ಞಾನಿಗಳ ದೃಷ್ಟಿಯಲ್ಲಿ ಸಾರೂಪ್ಯ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯವೆಂಬ ಚತುರ್ವಿಧ ಫಲಪದಂಗಳೆ ಇವರಿಗೆ ಮುಕ್ತಿ ಪ್ರಸಾದವಾಗಿಹವು.

ಭೇದ ಜ್ಞಾನಿಗಳ ಭಕ್ತಿ ಜ್ಞಾನವು ಹೀಗಿದೆ. ಪೂಜ್ಯ ಪೂಜ್ಯಕ, ಸ್ವಾಮಿ ಸೇವಕ ದೃಷ್ಟಿ ಭಾವ, ಜ್ಞಾನದಿಂದುಕ್ತವಾದುದು. ದೇವನು ಪೂಜಕನ ಇಷ್ಟಾರ್ಥವನ್ನು ಪೂರೈಸುವ ಪೂಜ್ಯನಾಗಿಹನು. ಪೂಜಕನು ಇಷ್ಟಾರ್ಥವ ಪಡೆಯುವ ಸೇವಕನಾಗಿಹನು. ದೇವನು ಸ್ವಾಮಿಯು, ಭಕ್ತನು ಸೇವಕನು ಆಗಿಹನು. ಇವರಲ್ಲಿ ಫಲಪದಂಗಳ ಪಡೆಯುವ ಇಚ್ಛೆಯು. ಇವರು ಕೊಡಕೊಳ್ಳುವ ಗುರಿಯಿಂದ ಸ್ವಾಮಿ ಸೇವಕ, ಪೂಜ್ಯ, ಪೂಜ್ಯಕರೆಂಬ ಕಲ್ಪಿತರಾಗಿಹರು. ಉದಾಹರಣೆ : ನಾಮದೇವನು ದಾಸನಾಗಿಹನು. ವಿಷ್ಣು ಭಗವಾನ್ ದೇವನಾಗಿಹನು. ಇದೆ ತರಹ ಶಂಕರ ಶಿವದೇವನಾಗಿಹನು. ಭಕ್ತರು ಪೂಜಕರಾಗಿಹರು. ಹೀಗೆಯೆ ದೇವಿಯು ಪೂಜ್ಯಳಾಗಿಹಳು. ಭಕ್ತನು ಪೂಜಕನಾಗಿಹನು. ದೇವನು ಘನನಾಗಿಹನು. ಭಕ್ತರು ಕಿರಿಕಿರಿದಾಗಿ ದೇವನ ಧ್ಯಾನ ಮಾಡಿ ಒಲಿಸಿಕೊಂಡು ಅವರಿಂದ ಫಲಪದಂಗಳ ಪಡೆದು ಸುಖಿಯಾಗಿಹೆವೆಂಬರು. ಇದು ಭಕ್ತಿ ಪ್ರಸಾದ ಮುಕ್ತಿ ಪ್ರಸಾದವೆಂದು ತಿಳಿದು ಸುಖಿಯಾಗಿಹೆವು ಎಂದು ಹೇಳಿಕೊಳ್ಳುವರು.

ಇತ್ತ ಅಭೇದ ಭಕ್ತರು ಅಭೇದ ಜ್ಞಾನಿಗಳು, ಅಭೇದ ಭಕ್ತಿಯಿಂದ ಗುರು ಭಕ್ತರಾಗಿ ಅಭೇದ ಜ್ಞಾನಿಗಳಾಗಿ, ಮಲ, ವಿಕ್ಷೇಪ, ಆವರಣವೆಂಬ ತ್ರಿದೋಷದಿಂದ ಬಿಡುಗಡೆಯಾಗಿ ಸದಾ ಬ್ರಹ್ಮಾಕಾರದಲ್ಲಿದ್ದು ಸುಖಿಸಿದೆವೆಂಬರು. ಇವರೀರ್ವರು ತಾವರಿಯದ ವಿವರ ತಮಗೆಲ್ಲಿಯದೊ ಎಂದು ಶರಣರು ಎಚ್ಚರಿಸಿಹರು.

ಅಭೇದ ಭಕ್ತರು ಅಭೇದ ಜ್ಞಾನಿಗಳು ಇವರು ಕಲ್ಪಿತರು. ಒಂದು ಬಿಟ್ಟು ಒಂದು ಹಿಡಿದವರು. ದ್ವೈತಿಗಳು ಕುರುಹಿನ ಭಕ್ತರಾಗಿಹರು. ಸಾಕಾರ ಭಕ್ತರಾಗಿಹರು. ಇವರಿಗೆ ಸಾಕಾರದ ಜ್ಞಾನ, ಸಾಕಾರ ಭಕ್ತರಾಗಿ ಬ್ರಹ್ಮಾದಿಗಳಿಂದ ಪಡೆಯುವ ಫಲಪದಂಗಳನಿಚ್ಛಿಸುವವರಾಗಿಹರು. ಇವರೀರ್ವರು ನಿರಂತರವಾಗಿಹ ಅಖಂಡೈಕರಸ ಸುಖ ಸವಿಯದವರು.

"ನಿತ್ಯನಿರಂಜನ ತಾನೆಂದರಿಯದೆ ತತ್ವಮಸಿಯೆಂದು ಹೊರಗನೆ ಬಳಸಿ ಸತ್ತಿತ್ತೆಲ್ಲಾ ಜಗವೆಲ್ಲ ನಾಯಿಸಾವ. ತಾವಾರೆಂದರಿಯದೆ ಸತ್ತವರ ಹೆಸರ ಪತ್ರ ನೋಡಿದಡೆತ್ತಣ ಮುಕ್ತಿ ಗುಹೇಶ್ವರಾ" ಎಂಬ ಪ್ರಭುವಿನ ಮಹಾಪ್ರಸಾದ ಕಾಣದ್ದರಿಂದ ತತ್ವಮಸಿಯೆಂದು ಹೊರಗನೆ ಬಳಸುವವರಾದರು. ಶಬ್ದನಷ್ಟ ಮಾಡಿದವರಾಗಲಿಲ್ಲ, ಜೀವ ಪರಮರೆಂಬ ಕಲ್ಪಿತ ನಷ್ಟಮಾಡಿದವರಾಗಲಿಲ್ಲ, ಬಂಧಮೋಕ್ಷದ ಸಂದ ತಿಳಿದವರಾಗಲಿಲ್ಲ, ಇದು ಕಾರಣ ಇವರಲ್ಲಿ ಬಂಧ ಮೋಕ್ಷದ ಜ್ಞಾನವೆ ಪ್ರಧಾನವಾಗಿ ಮರವು ಅರುವು ದೃಢವಾಗಿಹವು, ಏಕೆಂದರೆ ನಾಮರೂಪ ತಿರಸ್ಕರಿಸುವವರಾಗಿಹರು. ಆಸ್ತಿ, ಭಾತಿ, ಪ್ರಿಯವೆಂಬ ಆತ್ಮ ಪರಮಾತ್ಮರ ಲಕ್ಷಣವ ಹಿಡಿಯು

ವರಾಗಿ ಸದಾ ಬ್ರಹ್ಮಾಕಾರವುಳ್ಳವರಾಗಿರುವುದೆ ಮುಖ್ಯ ಗುರಿಯಾಗಿ ನಿರುಪಮವಾಗಿಹ ನಿಜದಿರುವು ಅರಿಯಲಿಲ್ಲ ಅರಿಯದ್ದರಿಂದ ತಾವರಿಯದ ವಿವರ ತಮಗೆಲ್ಲಿಯದು ಎಂದು ಸಿಂಹನಾದ ಮಾಡಿಹಳು.

ತಾವರಿಯದ ವಿವರ ತಮಗೆಲ್ಲಿಯದೊ ? ಕೆಲಬರು ದ್ವೈತವನಿಚ್ಛಿಸುವರು. ಕೆಲಬರು ಅದ್ವೈತವ ನಿಚ್ಛಿಸುವರು. ಇಂತವರು ದ್ವೈತಾದ್ವೈತ ವಿವರ್ಜಿತವಾಗಿಹ ಸಮಸ್ವರೂಪವನ್ನು ತಿಳಿಯಲಾರರು. ದ್ವೈತಿಗಳು ಭೇದಜ್ಞಾನವನ್ನೇ ಪ್ರೀತಿಸಿ ಭೇದದೃಷ್ಟಿಯವರಾದರು. ಅದ್ವೈತಿಗಳು ಅಭೇದ ಜ್ಞಾನವನ್ನೇ ಪ್ರೀತಿಸಿ ಅಭೇದ ದೃಷ್ಟಿಯವರಾದರು. ಇಂಥವರು ತಾವಾರೆಂದರಿಯದವರು. ಏಕೆಂದರೆ ದ್ವೈತಾದ್ವೈತ ವಿವರ್ಜಿತವಾದುದು ತನ್ನ ಸ್ವ ಸ್ವರೂಪ. ಅದು ಸಮ ಸ್ವರೂಪ. ಇಂತಪ್ಪ ತನ್ನಿರುವ ಅರಿಯದ್ದರಿಂದ ತಾವರಿಯದ ವಿವರ ತಮಗೆಲ್ಲಿಯದೊ ? ಎಂದು ಹೇಳಿಹಳು.

**ಸಂಗಯ್ಯನಲ್ಲಿ ಬಸವ ಕಾಯ ರಹಿತನಲ್ಲದೆ ಮತ್ತಾರನೂ ಕಾಣೆನಯ್ಯ :**

ಸಂಗಯ್ಯ, ತೆರಹಿಲ್ಲದ ಲಿಂಗಭರಿತನಾದವನೆ ಸಂಗಯ್ಯ. ಅರಿಯಲಿಲ್ಲದ ಅರುವಾಗಿಹ ಸ್ವಯಂಜ್ಯೋತಿ ಲಿಂಗವೆ ಸಂಗಯ್ಯ. ಇಂತಪ್ಪ ಪರತತ್ವ ತಿಳಿದವರು ಬಸವಾದಿ ಪ್ರಮಥರು. ತನುವಿನ ತನು ಮನದ ಮನ, ಜೀವದ ಜೀವವಾಗಿ ಇದ್ದುದ ಬಲ್ಲವರಾದುದರಿಂದ ಗುರುಲಿಂಗ ತಾನೆ, ಸ್ವಯಲಿಂಗ ತಾನೆ, ನಿರ್ಲಿಖಿತ ಜಂಗಮ ಲಿಂಗ ತಾನಾದುದರಿಂದ ಸಂಗಯ್ಯನಲ್ಲಿ ಬಸವ ಕಾಯ ರಹಿತನಲ್ಲದೆ ಮತ್ತಾರನೂ ಕಾಣೆನಯ್ಯ ಎಂದು ಹೇಳಿಹರು.

# ನೆನಹಿನ ತನು ಮನ ನಷ್ಟವಾಗುವುದೆ ಸುಖ

**ಮನವಿಲ್ಲ ಬಸವಂಗೆ, ತನುವಿಲ್ಲ ಬಸವಯ್ಯಂಗೆ,**
**ನೆನಹಿನ ತನು ಮನ ನಷ್ಟವಾದ ಬಳಿಕ,**
**ಸಂಗಯ್ಯನಲ್ಲಿ ಬಸವಯ್ಯನ ರೂಪು ನಿರೂಪಾದ ಬಳಿಕಯ್ಯ.**

**ತಾತ್ಪರ್ಯ : ಮನವಿಲ್ಲ ಬಸವಯ್ಯಂಗೆ :**

ಬಸವರಸ, ಕಲ್ಪನಾರಹಿತ. "ಬಿಟ್ಟು ಮಹೇಶನಾದೆನೆಂಬುದು ಅರುಹಿನ ಕೇಡು. ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು. ಬಿಡುವುದು, ಹಿಡಿವುದು ಮನ ಕಲ್ಪಿತವಲ್ಲದೆ, ಕಲ್ಪನಾರಹಿತ ಭಕ್ತ ಮಹೇಶ್ವರರಲ್ಲಿಪ್ಪುದೇನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ."

ಮನವಿಲ್ಲ ಬಸವಯ್ಯಂಗೆ, ಬಸವಯ್ಯನು ಕಲ್ಪನಾರಹಿತನಾಗಿಹುದರಿಂದ ಬಿಟ್ಟು ಮಹೇಶನಾದವನನ್ನು ಕಂಡುದಿಲ್ಲ, ಇತ್ತ ಹಿಡಿದು ಭಕ್ತನಾದವ ತಾನಲ್ಲ. ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಹ ಘನಕ್ಕೆ ಘನ, ಉಪಮಿಸಲುಂಟೆ ? ಮನವಿದ್ದಲ್ಲಿ ಇಲ್ಲದುದ ಕಲ್ಪಿಸುವ ಸಂಕಲ್ಪವುಂಟು. ಇದ್ದುದನರಿಯದಿಹ ವಿಕಲ್ಪವುಂಟು. ಈ ಉಭಯದಿಂದುಕ್ತವಾದ ಸುಳಿದಾಟ ಬಸವಯ್ಯನದಲ್ಲ ಇದ್ದುದನರಿತ ಸ್ವಮಹಿಮ್ನನು.

ಬಸವಪ್ರಭು, ಅರಿಯಲಿಲ್ಲದ ಅರುವ ಸ್ವೀಕರಿಸಿದ ಮಹಾಂತ. ಏನನ್ನು ಅರಿಯಲಿಲ್ಲ, ಏನನ್ನು ಮರೆಯಲಿಲ್ಲ, "ನರರು ಸುರರು ಮೊದಲಾದವರ ಅರಿಯಲಿಲ್ಲ, ದೇವಗಣ,

ರುದ್ರಗಣ, ಪ್ರಮಥ ಗಣ ಮೊದಲಾದವರ ಅರಿಯಲಿಲ್ಲ, ಸತ್ಯರು, ನಿತ್ಯರು ಮುಕ್ತರೆಂಬ ಅರುವಿನ ಅಭಿಮಾನಿಗಳ ಅರಿಯಲಿಲ್ಲ." ಇತ್ತ ಪಿಂಡಾಂಡ, ಬ್ರಹ್ಮಾಂಡವನರಿಯಲಿಲ್ಲವಾದ್ದರಿಂದ ಅಂಡಜವಳಿದ ಮಹಾಂತ. ಪಿಂಡಜವಳಿದ ಮಹಾಂತ. ಬ್ರಹ್ಮಾಂಡವನಳಿದ ಮಹಾಂತ, ಸಾಕಾರ ನಿರಾಕಾರ ಏಕೋದೇವನಾಗಿ ಕಂಡ ಮಹಾಂತ. ಸಂಗವಳಿದ ಮಹಾಂತ. ನಿಸ್ಸಂಗವಳಿದ ಮಹಾಂತ. ಮಹಾಲಿಂಗವರಿತು ಸ್ವಯಲಿಂಗಿಯಾಗಿಹ ಮಹಾಂತಪ್ಪನಯ್ಯ ತನ್ನಿರುವ ಮರೆಯಲಿಲ್ಲವಾದ್ದರಿಂದ ಮನವಿಲ್ಲ ಬಸವಯ್ಯಂಗೆ ಎಂದು ಹೇಳಿಹಳು.

ಆರು ಇದ್ದುದನರಿತಿಹರು ಅವರಿಗೆ ಮನವಿಲ್ಲ, ಇದ್ದುದು, ಅಂದು ಇದ್ದುದು, ಇಂದು ಇದ್ದುದು, ಮುಂದೆ ಇದ್ದುದು, ಇದ್ದ ಮಹಾಘನ ಇದ್ದುದೆಂದುದಲ್ಲ, ಇಲ್ಲದುದೆಂದುದಲ್ಲ, ಮಾತಿಲ್ಲದ ಮಹಾಘನ, ಕೇವಲ ಜ್ಯೋತಿ ವರ್ಣಾತೀತವಾಗಿಹ ಘನದಿರುವು ತನ್ನಿಂದ ತನಗೆ ವೇದ್ಯವಾದುದಾಗಿ ಅವರಿಗೆ ಮನವಿಲ್ಲವೆಂದಲ್ಲಿ ಅಲ್ಲಿ ಗುರುವೆಂದಲ್ಲಿಯೆ ತಪ್ಪಿತ್ತು. ಲಿಂಗವೆಂದಲ್ಲಿಯೆ ತಪ್ಪಿತ್ತು. ಜಂಗಮವೆಂದಲ್ಲಿಯೆ ತಪ್ಪಿತ್ತು. ಪ್ರಸಾದವೆಂದಲ್ಲಿಯೆ ತಪ್ಪಿತ್ತು. ಈ ಚತುರ್ವಿಧ ಸಂಚಯ ನಿಕ್ಷೇಪವ ಬಲ್ಲಾತ ಆ ಮಹಾಂತ ಗುರುವಿಂಗೆ ಗುರುವಾಗಿಹ ಗುರು ಲಿಂಗ, ಲಿಂಗಕ್ಕೆ ಲಿಂಗವಾಗಿಹ ಸ್ವಯಲಿಂಗಿ, ಜಂಗಮಕ್ಕೆ ಜಂಗಮವಾಗಿಹ ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯವಾಗಿಹ ನಿರ್ಲಿಖಿತ ಜಂಗಮ ಲಿಂಗ, ಇಂತಪ್ಪ ಮಹದಿರುವೆ ತನ್ನಿರುವು ತಾನಾದವಂಗೆ ಮನವಿಲ್ಲ ಬಸವಂಗೆ ಎಂದು ಹೇಳಿಹಳು.

***ತನುವಿಲ್ಲ ಬಸವಯ್ಯಂಗೆ :***

ಬಸವಯ್ಯ ತೆರಹಿಲ್ಲದ ಲಿಂಗಭರಿತವೆಂಬ ಸಾಹಿತ್ಯರೂಪಿ ಗುರುಕಾರುಣ್ಯವ ಅರಿದರಿದು ನೋಡಿದ ಸರ್ವಾಂಗ ಲಿಂಗಿಗೆ ತೆರಹಿಲ್ಲದ ನುಡಿ, ತೆರಹಿಲ್ಲದ ನಡೆ, ತೆರಹಿಲ್ಲದ ವಿಶ್ರಾಮ ಸ್ಥಾನ, ಸುಖದ ಸುಖ, ತೆರಹಿಲ್ಲದ ಗಂಭೀರ, ತೆರಹಿಲ್ಲದ ಮಹಾಮಹಿಮ ತೆರಹಿಲ್ಲ ಕೂಡಲ ಚೆನ್ನ ನಿಮ್ಮ ಶರಣಂಗೆ.

ಬಸವರಸರ ತೆರಹಿಲ್ಲದ ನುಡಿ ತೆರಹಿಲ್ಲದ ನಡೆಯಾದುದರಿಂದ ತನುವಿದೆ ಎನ್ನಲು ತೆರಹಿಲ್ಲ, ತನುವಿಲ್ಲವೆನ್ನಲು ತೆರಹಿಲ್ಲ, ತನು ಹುಟ್ಟಿದೆ ಬದುಕಿದೆ ಅದರ ಬಾಲ್ಯ ಯೌವ್ವನ ಮುಪ್ಪು ಮರಣ. ಅದು ಸೊಕ್ಕಿದೆ, ಸೊರಗಿದೆ ಎನ್ನಲು ತೆರಹಿಲ್ಲ. ತೋರಬಾರದ ಘನವೆ ತನ್ನಿರುವು ಆದ ಮಹಾಮಹಿಮಂಗೆ ತೋರುವ ತನುವಿಲ್ಲ, ಅದು ಹುಟ್ಟಿದುದು ಇಲ್ಲ, ಬದುಕಿದುದು ಇಲ್ಲ, ಸತ್ತುದೂ ಇಲ್ಲ, ಇಲ್ಲವೆಂಬುದು ಇಲ್ಲವೆಂದರಿತ ಶಬ್ದಮುಗ್ಧನಿಗೆ ಸ್ಥೂಲ ತನು ವೇತರದು, ಸೂಕ್ಷ್ಮ ತನುವೇತರದು, ಕಾರಣ ತನುವೇತರದು, ಮಹಾಕಾರಣ ತನುವೇತರದು, ತನುವಿನ ತನುವಾಗಿಹ ತೋರಬಾರದ ಘನನಾಗಿಹ ಮಹಾಂತನ ವಿಷಯದಲ್ಲಿ ಹೇಳಲೆಂದೇನೊ ? ಹೇಳಬಾರದಿದ್ದಲ್ಲಿ ತೋರುವ ತನುವಿಲ್ಲ ಬಸವಯ್ಯಂಗೆ ಎಂದು ಹೇಳಿಹಳು.

***ನೆನಹಿನ ತನು ಮನ ನಷ್ಟವಾದ ಬಳಿಕ, ಸಂಗಯ್ಯನಲ್ಲಿ ಬಸವಯ್ಯನ ರೂಪ ನಿರೂಪಾದ ಬಳಿಕ :***

ನೆನಹಿನ ತನು ಮನ ನಷ್ಟವಾದ ಪರಿ ಎಂತು ? ತನುವೆಂದರೆ ತನಗಿದುರಾಗಿ ತೋರುವ ತನು, ಅದು ಸ್ಥೂಲವೆ ಇರಲಿ, ಸೂಕ್ಷ್ಮವೆ ಇರಲಿ, ಅದು ಕಾರಣವಾಗಿರಲಿ, ಇವುಗಳೆಲ್ಲ ನುಡಿ ಮಾತ್ರವು. ಕಲ್ಪಿತದಿಂದುಕ್ತವು. ಭಾವದಿಂದುಕ್ತವು. ಎಲ್ಲಿ ಕಲ್ಪಿತ ಅಲ್ಲಿಯೆ ತನು ಮನ ಭಾವ ನುಡಿ ಇದ್ದುದರಿಂದ ನೆನಹಿನ ತನುವೆಂದು ಹೇಳಿಸಿಕೊಳ್ಳುವುದು.

ನೆನಹಿನ ತನು, ಮನ ದ್ವಿವಿಧ ರೂಪಾದುದು ಒಂದು ಮರವಿನದು, ಒಂದು ಅರುವಿನದಾಗಿಹುದು. ಮರವಿನಲ್ಲಿ ತೋರುವ ತನು, ಇಂದ್ರಿಯಾದಿಗಳು, ಪ್ರಾಣಾದಿಗಳು, ಕರಣಾದಿಗಳು ಇತ್ತ ಅರುವಿನಲ್ಲಿ ತೋರುವ, ಸಾಕ್ಷಿ ಅಸಂಗ, ದೃಕ್, ಕೂಟಸ್ಥ, ಸ್ವಯಂಪ್ರಕಾಶ, ಸತ್‌ಚಿತ್ ಆನಂದ, ನಿತ್ಯ ಪೂರ್ಣ ಇದರ ಅಹಂತ್ವವು ಇವು ನೆನಹಿನ ತನುಮನವಾಗಿವೆ. ಇವುಗಳು ನಷ್ಟವಾದ ಬಳಿಕ ಸಂಗಯ್ಯನಲ್ಲಿ ಬಸವಯ್ಯನ ರೂಪು ನಿರೂಪವಾದುದು.

ಸಂಗಯ್ಯ ಆರು ? ಅರಿಯಲಿಲ್ಲದ ಅರುವು ಅದು ಅರಿಯಬಾರದ ಘನ. ಅದು ಸಂಗಯ್ಯನ ಇರುವು, ಸಂಗಯ್ಯನಲ್ಲಿ ಅರಿಸಿಕೊಳ್ಳುವ ತೋರುವ ತನು, ಇಂದ್ರಿ, ಪ್ರಾಣ, ಕರಣಾದಿಗಳು ಇಲ್ಲ, ಇತ್ತ ಅರಿಯುವ ದೃಕ್‌ರೂಪ ಪರಮಾರ್ಥ ಲಕ್ಷಣವಿಲ್ಲ, ಇವೆರಡಕ್ಕೂ ಅವಕಾಶಕೊಡದ ಘನವದು ಅರಿಯಲಿಲ್ಲದ ಅರುವು. ಅಂತಪ್ಪ ಅರಿಯಲಿಲ್ಲದ ಅರುವ ಸ್ವೀಕರಿಸಿ ನೆನಹಿನ ತನು ಮನ ನಷ್ಟವಾದುದರಿಂದ ಬಸವಯ್ಯನ ರೂಪು ನಿರೂಪವಾದುದು.

ಬಸವಯ್ಯಂಗೆ ತನುವಿಲ್ಲವಾದುದರಿಂದ ಬಸವಯ್ಯನ ರೂಪು ನಿರೂಪವಾದುದು. ಬಸವಯ್ಯನು ಅನುವ ಕಂಡುದರಿಂದ ತನುವ ಕಾಣಲಿಲ್ಲ, ಬಸವಯ್ಯ ಅರಿಯಲಿಲ್ಲದ ಅರುವ ಅರಿತುದರಿಂದ ಮನವಿಲ್ಲ ಬಸವಯ್ಯಂಗೆ ಎಂದು ಹೇಳಿಹಳು. ಅರಿಯಲಿಲ್ಲದ ಅರುವ ಅರಿತುದರಿಂದ ಅರಿಯಲಿಲ್ಲದ ಮರೆಯಲಿಲ್ಲದ ತನ್ನಿರುವು ಆದುದರಿಂದ ನೆನಹಿನ ತನು ಮನ ನಷ್ಟವಾಗಿ ಬಸವಣ್ಣನ ರೂಪ ನಿರೂಪವಾದುದು ಎಂದು ಹೇಳಿಹಳು.

# ಸಮಯಾಚಾರ ಸದ್ಭಕ್ತಿಯ ನೆಲೆಯೆ ಬಸವಣ್ಣ

**ಮಾಟ ಕೂಟ ಸಮಯಾಚಾರ ಸದ್ಭಕ್ತಿಯ**
**ನೆಲೆಯ ನಮ್ಮ ಬಸವಣ್ಣನಲ್ಲದೆ ಮತ್ತಾರು ಅರಿಯರು.**
**ಅರುವಿನ ಕುರುಹನಾತ್ಮದಲ್ಲಿ ನಿಲಿಸಿ,**
**ಶಿವಕೂಟ ಸಮಾಧಿಯ ಕಂಡು ಆನು ಬದುಕಿದೆನಯ್ಯ ಸಂಗಯ್ಯ.**

ತಾತ್ಪರ್ಯ : ***ಮಾಟ, ಕೂಟ, ಸಮಯಾಚಾರ ಸದ್ಭಕ್ತಿಯ ನೆಲೆಯ ಬಸವಣ್ಣನಲ್ಲದೆ ಮತ್ತಾರೂ ಅರಿಯರು*** : ಮಾಟ ? ಇದಾವ ಮಾಟ, ತೋರುವ ಮಾಟವಲ್ಲವಾದ್ದರಿಂದ ಕೃತ್ಯಕ್ಕೆ ಬಾರದ ಮಾಟ(ಲಿಂಗ) "ಕೃತ್ಯಕ್ಕೆ ಬಾರದ ಲಿಂಗ, ಕೃತ್ಯಕ್ಕೆ ತಂದವರಾರೊ ? ಬೊಟ್ಟಿಡಲೆಡೆಯಿಲ್ಲದ ಲಿಂಗ ಪರಾತ್ಪರ ಗುರು ಕೊಟ್ಟ ಶಿಶ್ಯ ತಕ್ಕೊಂಡನೆಂಬ ರಚ್ಚೆಯ ಭಂಡರ ನೋಡಾ ಗುಹೇಶ್ವರಾ."

ಮಾಟ ? ಇದು ಕೃತ್ಯಕ್ಕೆ ಬಾರದ ಮಾಟ, ಇದು ಕರಕಮಲದಲ್ಲಿ ಪ್ರಜ್ವಲಿಸುವ ಮಾಟ, ಸದ್ಗುರುನಾಥ ಕರಕಮಲಕ್ಕೆ ಕರುಣಿಸಿದ ಮಾಟ. ಈ ಮಾಟದ ವಿಷಯದಲ್ಲಿ ಸರಿಯಾಗಿ ತಿಳಿದುಕೊಂಡವರು ಕಡಿಮೆ. ಇದನ್ನು ಗುರುಘನ ಕೊಟ್ಟ, ಶಿಷ್ಯಕೊಂಡನೆಂಬ ಕೊಡ ಕೊಳ್ಳುವ ಭಾವ ಉಂಟು ಮಾಡಿಹರು. ಇವರುಗಳು ಕೃತ್ಯಕ್ಕೆ ಬಾರದ ಮಾಟವೆಂದು ತಿಳಿಯದೆ ಗುರುವು ಈ ಮಾಟವನ್ನು ಮಾಡಿ ಕೊಟ್ಟಿಹನೆಂದು ತಿಳಿದುದರಿಂದ ಇದು ಪೂಜೆಗೆ ಬಾರದ ಲಿಂಗವಾಗಿದ್ದರೂ ಪೂಜಿಸುವ ಲಿಂಗವಾಗಿ ಪೂಜ್ಯ, ಪೂಜಕನೆಂಬ ಭೇದಜ್ಞಾನವಾಗಿ ಫಲಪದಂಗಳನೀವ ದೇವನಾದನು. ಭಕ್ತನು ತನ್ನ ಇಷ್ಟಾರ್ಥ ಪೂರೈಸುವ ಶೈವ ಸಂಪ್ರದಾಯ

ವಾಯಿತ್ತು. ಅದು ಕಾರಣ ಮಾಟ, ಕೂಟ, ಸಮಯಾಚಾರ ಸದ್ಭಕ್ತಿಯ ನೆಲೆಯ ನಮ್ಮ ಬಸವಣ್ಣನಲ್ಲದೆ ಮತ್ತಾರೂ ಅರಿಯರು ಎಂದು ನೀಲಮ್ಮ ತಾಯಿ ಬಿತ್ತರಿಸಿಹಳು.

ಬಸವರೆಸರು ಮಹಾ ಘನ ಶ್ರೀಗುರು, ಇಂತಪ್ಪ ಬರ್ಗೋದೇವನನ್ನು ಸಮಯಾಚಾರ ಸಾಂಪ್ರದಾಯ ಜ್ಞಾನಿಗಳು ಬಸವಣ್ಣಫ್ಣೆ ಭಕ್ತ ನಾವು ಗುರು ವರ್ಯರು ಎಂದು ಹೇಳಿಕೊಳ್ಳುವವರು ಬಹುವಾಗಿ ಇಹರು.

ಹರ ತನ್ನ ರೂಪ ತೋರಬೇಕೆಂದು ಗುರು ರೂಪವಾಗಿ ಬಂದು ಮನ ಸ್ಥಲಕ್ಕೆ ಮಂತ್ರವಾದ ತನು ಸ್ಥನಕ್ಕೆ ಪ್ರಸಾದವಾದ, ಕರಸ್ಥಲಕ್ಕೆ ಲಿಂಗವಾದ. ಇಂತೀ ತ್ರಿವಿಧದಲ್ಲಿ ತ್ರಿವಿಧ ಸಾಹಿತ್ಯವಾದನೆಯ್ಯ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನು.

ಬಸವಣ್ಣ, ಮಾಟ, ಕೂಟ ಸಮಯಾಚಾರ ಸದ್ಭಕ್ತಿಯ ತಿಳಿಸಲು ಬಂದ ಗುರುರೂಪ, ಹರ ತನ್ನ ರೂಪ ತೋರಬೇಕೆಂದು ಗುರು ರೂಪವಾದುದರಿಂದ ಲಿಂಗವದು, ಕೃತ್ಯಕ್ಕೆ ಬಾರದ ಲಿಂಗ ಕೃತ್ಯಕ್ಕೆ ತಂದವರಾರೊ ? ಎಂದು ಕೊಡ ಕೊಳ್ಳುವ ವ್ಯವಹಾರ ಕೆಡಿಸಿ, ಇದು ಅರುವಿನರುವು "ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ, ನಾದಬಿಂದು ಕಲೆಗಳಿಗೆ ಅಭೇದ್ಯವಾಗಿಹ ಅಚಲಿತ ಲಿಂಗ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ವಾಙ್ಮನಕ್ಕೆ ಬಾರದ ಅಖಂಡಿತ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ಇನ್ನು ನಾನು ಬದುಕಿದೆ, ನಾ ಬಯಸಿದ ಬಯಕೆ ಕೈಸಾರಿತಿಂದು" ಎಂದು ಬಸವಣ್ಣ ಬಿತ್ತರಿಸಿದುದು ನೋಡಿದಡೆ, ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮಲಿಂಗ. ನಾದ ಬಿಂದು ಕಳೆಗಳಿಗಭೇದ್ಯವಾಗಿಹ ಅಚಲಿತ ಲಿಂಗ, ವಾಙ್ಮನಕ್ಕೆ ಬಾರದ ಅಖಂಡಿತ ಲಿಂಗವೆಂದು ತಿಳಿಸಿದುದಲ್ಲದೆ, "ಅರಿದಿಹೆನೆಂದಡೆ ಅರುಹಿಂಗಸಾಧ್ಯ, ನೆನೆದಿಹೆ ನೆಂದಡೆ ನೆನಹಿಂಗಸಾಧ್ಯ ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರ ಲಿಂಗವ ಗುರು ತೋರದನ್ನಕ್ಕರ ಗುರುಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಲಿಂಗ ಉದಯವಪ್ಪುದೆಂಬ ಶೃತಿ ಹುಸಿಯೆ ? ಕೂಡಲ ಸಂಗಮದೇವಾ ನಿಮ್ಮ ಮಹಾನುಭಾವದ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ" ಎಂದುದು ನೋಡಿದಡೆ ಬಸವಯ್ಯನ ಮಾಟ; ಇದು ಅನುಪಮ ಅಖಂಡ ಅಚಲಿತ ಲಿಂಗವೆಂದು ತಾನೆ ಬಿತ್ತರಿಸಿರುವಾಗ ಅದು ಪೂಜಾಲಿಂಗವೆಂದು ಒಪ್ಪಿರಬಹುದೆ ? ಅರುವಿನರುವಾಗಿಹ ಮಾಟ, ಅರಿದಿಹೆನೆಂದಡೆ ಅರುವಿಂಗಸಾಧ್ಯವಾಗಿಹ ಮಾಟ, ನೆನೆದಿಹೆನೆಂದವರಿಗೂ ಅಸಾಧ್ಯವಾಗಿಹ ಮಾಟ, ಭಾವಿಸಿಹೆನೆಂದರೆ ಭಾವಕ್ಕ ಸಾಧ್ಯವಾಗಿಹ ಮಾಟ. ವಾಙ್ಮನಕ್ಕೆ ಬಾರದ ಮಾಟ (ಲಿಂಗ) ಗುರು ತೋರದಿದ್ದಲ್ಲಿ ಅಸಾಧ್ಯವಾಗಿಹ ಮಾಟ, ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಲಿಂಗವಾಗಿ ಉದಯಿಸಿದ ಮಾಟ, ಮಹಾನುಭಾವರ ಮಥನದಲ್ಲಿ ಪ್ರಜ್ವಲಿಸುವ ಮಾಟ, ಇದು ಬಸವರಸರು, ಲಿಂಗ(ಮಾಟ)ದ ನೆಲೆಯ ಅರಿದ ಮಾಟ, ಇದನ್ನು ಪೂಜಾಲಿಂಗವಾಗಿ ಕುರುಹು ಆಗಿ ಕಾಣದ ಮಾಟ, ಇದು ತೆರಹಿಲ್ಲದ ಲಿಂಗ ಭರಿತವೆಂಬ ನಾಮವಿಡಿದು, ಅರಿಯ ಹೋದ ಘನ, ಇಂತಪ್ಪ ರಹಸ್ಯವುಳ್ಳ ಮಾಟ ಸಕಲರ ಅಭ್ಯುದಯಕ್ಕಾಗಿ ತಾನೆ ಸ್ವೀಕರಿಸಿದಂತೆ ಅಭಿನಯಿಸಿದ.

"ಅರಿಯಲಿಲ್ಲದ ಅರುವ ಅವಗ್ರಹಿಸಿ ಅರಿಯಲಿಲ್ಲ, ಮರೆಯಲಿಲ್ಲ ನಿಜವು ನಿಂದಿತ್ತಾಗಿ ನಿರ್ನಾಮವಾಯಿತ್ತು. ನಷ್ಟತ್ತಿಯಾಯಿತ್ತು. ಅಗಮ್ಯದಲ್ಲಿ ಗಮನ ಗೆಟ್ಟಿತ್ತು. ನಿಂದಲ್ಲಿ ನಿರಾಳವಾಯಿತ್ತು. ಕೂಡಲ ಸಂಗಮದೇವರಲ್ಲಿ ಶಬ್ದಮುಗ್ಧವಾಯಿತ್ತು." ಹೀಗೆ ಬಸವರಾಜ

ದೇವರು ಬಿತ್ತರಿಸಿದುದು ನೋಡಿದಡೆ.

ಮಾಟ ? ಅದು ಲಿಂಗ, ತೆರಹಿಲ್ಲದಲಿಂಗ ಭರಿತ ಕೂಟ, ಕೂಡದಗಲದ ಕೂಟ, ಸಮಯಾಚಾರ ಸಮಸ್ವರೂಪವಾಗಿಹ ತನ್ನ ಆಚಾರ, ಅಗೋಚರ ಆಚಾರ, ವಾಙ್ಮನಕ್ಕಗೋಚರವಾಗಿಹ ಆಚಾರ, ಒಡಲಳಿದ ಆಚಾರ, ಸದ್ಭಕ್ತಿ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿಹ ನಿತ್ಯನಾಗಿರ್ಪನ ಭಕ್ತಿ ನೆಲೆಯ ನಮ್ಮ ಬಸವಣ್ಣನಲ್ಲದೆ ಮತ್ತಾರೂ ಅರಿಯರು. ಇದು ಕಾರಣ ಬಸವಾದಿ ಪ್ರಮಥರುಗಳಾದ ಚೆನ್ನಬಸವಣ್ಣ ಪ್ರಭುದೇವ, ಸಿದ್ಧರಾಮ ಶಿವಯೋಗಿ ತಂದೆ ಹಡಪದಪ್ಪಣ್ಣ ತಂದೆ, ನೀಲಾಂಬಿಕೆ, ಅಕ್ಕಮಹಾದೇವಿ, ಅಕ್ಕನಾಗಮ್ಮ ಮೊದಲಾದವರು ತಿಳಿದ ಕೂಟ ಬೇರೆ, ಸಮಯಾಚಾರ ಬೇರೆ, ಸದ್ಭಕ್ತ ಬೇರೆ, ಅವರು ತಿಳಿದುದಕ್ಕೂ ಲಿಂಗವನ್ನು ಕುರುಹೆಂದು ತಿಳಿದು ಪೂಜಿಸುವ ಲಿಂಗವಂತರಿಗೂ ಹಗಲು ರಾತ್ರಿಯಷ್ಟು ವ್ಯತ್ಯಾಸವಿದೆ.

***ಅರುವಿನ ಕುರುಹನಾತ್ಮದಲ್ಲಿ ನಿಲ್ಲಿಸಿ ಶಿವಕೂಟ ಸಮಾಧಿಯ ಕಂಡು ಆನು ಬದುಕಿದೆನಯ್ಯ ಸಂಗಯ್ಯ*** :

ಅರುವಿಂಗರುವಾಗಿಹ ಕುರುಹೆ ಇಲ್ಲಿ ಮಾಟ(ಲಿಂಗ)ವಾಗಿದೆ. ಅದುವೆ ಅರಿಯಲಿಲ್ಲದ ಅರುವು. ಇಂತಪ್ಪ ಅರಿಯಲಿಲ್ಲದ ಅರುವ ಅರಿತು ಅನಾತ್ಮವ ಅರಿಯಲಿಲ್ಲ, ತನ್ನಿರುವಾಗಿಹ ಸ್ವಸ್ವರೂಪ ಮರೆಯದೆ ನಿಜದಲ್ಲಿ ನಿಂತುದೆ ಆತ್ಮದಲ್ಲಿ ನಿಲ್ಲಿಸಿದುದಾಗಿದೆ.

ಅಂತಪ್ಪ ಅರಿಯಬಾರದ ಘನಾತ್ಮದಲ್ಲಿ ನಿಂತುದೆ ಶಿವಕೂಟ ಸಮಾಧಿಯಾಗಿದೆ. ಶಿವಕೂಟ ಸಮಾಧಿ ನಾಮಂಗಳೆಲ್ಲ ನಿರ್ನಾಮವಾಗಿ ನಿಷ್ಪತ್ತಿಯಾದುದು ಅದು ಶಿವಕೂಟ ಸಮಾಧಿಯ ಕಂಡುದುದಾಗಿದೆ. ಇಂತಪ್ಪ ಪರಮ ರಹಸ್ಯವರಿತು ಆನು ಬದುಕಿದೆನಯ್ಯ ಸಂಗಯ್ಯ. ಆನು ಅಗಮ್ಯವಾಗಿ ಗಮನಗೆಟ್ಟು ನಿಂದಲ್ಲಿ ನಿರಾಳಾಗಿ ಶಬ್ದಮುಗ್ಧನಾದುದೆ ಆನು ಬದುಕಿದೆನಯ್ಯ ಎಂದು ಹೇಳಿಹಳು.

# ಮಾಟವಿಲ್ಲದ ಸಮಯಾಚಾರ

**ಮಾಟವಿಲ್ಲದ ಸಮಯಾಚಾರವ ಮಾಡ ಹೋದೆ ಬಸವಾ,**
**ಆ ಸಮಯಾಚಾರವನರಿದು ಕೂಡಿದೆ ಬಸವಾ,**
**ಆ ಮಾಟ ಸುಯಿಧಾನವಾಯಿತ್ತಯ್ಯ ಬಸವಾ,**
**ಆ ಸುಯಿದಾನದ ಸುಖವ ನರಿಯಲು**
**ಸಂಗಯ್ಯನಲ್ಲಿ ಬಸವನೊಂದೆ ರೂಪಾದ.**

**ತಾತ್ಪರ್ಯ : *ಮಾಟವಿಲ್ಲದ ಸಮಯಾಚಾರವ ಮಾಡ ಹೋದೆ ಬಸವಾ*** :

ಇದಾವ ಮಾಟವಿಲ್ಲದ ಸಮಯಾಚಾರ ಮಾಡ ಹೋದುದು. ಸಮಸ್ವರೂಪವದು ತಾನೆ ಆಗಿಹ ಘನ ಲಿಂಗ. ಇಂತಪ್ಪ ಮಾಟವಿಲ್ಲದ ಸಮಯಾಚಾರ ಮಾಡ ಹೋದ ಘನವಂತ. ಆಗಮವಿಲ್ಲದ ದೀಕ್ಷೆಯ ಸಂಪಾದಿಸಿದ ಸಂಪನ್ನ, ಕಿವಿಗೆ ಕೇಳದ ಮಂತ್ರವ ಕಂಡು ಕಿವಿಯ ಕಿವಿಯಾಗಿಹ ಸಂಪನ್ನ, ಲಿಂಗ ಕಣ್ಣು, ಕಣ್ಣು ಲಿಂಗವಾಯಿತ್ತೆ? ಆಹಹ ಬಸವೇಶ, ನೀನು ಮಾಟವಿಲ್ಲದ ಸಮಯಾಚಾರ ಮಾಡ ಹೋದುದು, ನರರು ಸುರರು ಅದನೆಂತು ಸುರುವುದು?

ಮಾಟವಿಲ್ಲದ ಸಮಯಾಚಾರ, ನಿನ್ನ ಆಚಾರ ಅಗೋಚರ. "ಗುರುವಿಲ್ಲದ ಲಿಂಗ, ಲಿಂಗವಿಲ್ಲದ ಗುರು. ಗುರು ಲಿಂಗವಿಲ್ಲದ ಶಿಷ್ಯ. ಶಿಷ್ಯನಿಲ್ಲದ ಸೀಮೆ, ಸೀಮೆಯಿಲ್ಲದ ನಿಸ್ಸೀಮ ಕೂಡಲ ಚೆನ್ನಸಂಗಾ ನಿಮ್ಮ ಶರಣ." ಮಾಟವಿಲ್ಲವಾದ್ದರಿಂದ ಇದು ಗುರುವಿಲ್ಲದ ಲಿಂಗ, ಇದು ಲಿಂಗವಿಲ್ಲದ ಗುರು, ಗುರುವಿನಿಂದ ಲಿಂಗವಾಯಿತ್ತೆನ್ನಲೆ ? ಗುರುವಿಲ್ಲದ ಮಾಟವಾಗಿಹಲಿಂಗ, ಲಿಂಗದಿಂದ ಗುರುವಾಯಿತ್ತೆನ್ನಲೆ? ಇದು ಲಿಂಗವಿಲ್ಲದ ಗುರು. ಬಸವ ಪ್ರಭು, ಗುರು ಲಿಂಗವಿಲ್ಲದ ಶಿಷ್ಯ, ಸೀಮೆ ಇಲ್ಲದ ನಿಸ್ಸೀಮ, ಕೂಡಲ ಚೆನ್ನಸಂಗಾ ನಿಮ್ಮ ಶರಣ, ಇಂತಪ್ಪ ಶರಣವರೇಣ್ಯನ ಹಿರಿಮೆ ಘನಕ್ಕೆ ಘನವಾದುದು.

"ತಾನಿಲ್ಲದ ಮುನ್ನ ಗುರುವೆಲ್ಲಿಯದೊ ? ತಾನಿಲ್ಲದ ಮುನ್ನ ಲಿಂಗವೆಲ್ಲಿಯದು, ತಾನಿಲ್ಲದ ಮುನ್ನ ಜಂಗಮವೆಲ್ಲಿಯದು, ತಾನಿಲ್ಲದ ಮುನ್ನ ಪ್ರಸಾದವೆಲ್ಲಿಯದು, ಗುರುವೆಂದ ರಿತವನು ತಾನೆ, ಲಿಂಗವೆಂದರಿತವನು ತಾನೆ, ಜಂಗಮವೆಂದರಿತವನು ತಾನೆ, ಪ್ರಸಾದವೆಂದರಿ ತವನು ತಾನೆ, ಇಂತಿವೆಲ್ಲವು ಹೆತ್ತರಿವು. ತಾನೆ ಸ್ವಯಂಜ್ಯೋತಿ ಕಲ್ಲೇಶ್ವರಾ."

ಇದು ಮಾಟವಿಲ್ಲದ ಸಮಯಾಚಾರ ಮಾಡಹೋದ ಪರಿ ನೋಡಿರೆ ? ಗುರುವಿನ ಗುರು ಅರಿತವಂಗೆ ಅದೇತರ ಮಾಟ? ಲಿಂಗಕ್ಕೆ ಲಿಂಗವಾಗಿಹ ಸ್ವಯಲಿಂಗಿಗೆ ಅದೇತರ ಮಾಟ, ಜಂಗಮಕ್ಕೆ ಜಂಗಮ, ಇದು. ಸುಚೈತನ್ಯಕ್ಕೆ ನಿಜ ಚೈತನ್ಯವಾದವಂಗೆ ಅದೇತರ ಮಾಟ. ಪ್ರಸಾದಕ್ಕೆ ಪ್ರಸಾದವಾಗಿಹ ಪರಿಣಾಮಿಗೆ ಅದೇತರ ಮಾಟ. ಕಲ್ಪಿತನಿಗೆ ಮಾಟ ಉಂಟು, ಕೂಟ ಉಂಟು, ಸಮಯಾಚಾರದ ಹಂಗುಂಟು. ಹಿಡಿದು ಭಕ್ತನಾಗಿಹ ಭಕ್ತಿ ಯುಂಟು. ಕಲ್ಪನಾರಹಿತನಾದ ಸ್ವಯಂಜ್ಯೋತಿಗೆ ಅದೇಕೆ ಹೆತ್ತರುವಿನ ಸಹಾಯ. ಬಾಲಕನಿಗೆ ನಡೆಯಲು ಬಂಡಿ ಬೇಕು. ದೊಡ್ಡವರಿಗೂ ನಡೆಯಲು ಬಂಡಿ ಬೇಕೆ ? ಬೇಕಾಗದು. ತನ್ನಿಂದ ತನ್ನ ಕಂಡವಂಗೆ ಮಾಟದ ಹಂಗೇಕೆ ? ಕೂಡದಗಲದ ತನ್ನಿರುವು ತನ್ನಿಂದ ತನಗೆ ವೇದ್ಯವಾದವಂಗೆ ಕೂಟದ ಹಂಗೇಕೆ ? ಆಚಾರವೆ ಅಗೋಚರವೆಂದರಿತವಂಗೆ ಈ ಸಮಯಾ ಚಾರದ ಹಂಗೇಕೆ ? ಒಡಲಳಿದವಂಗೆ ಕೂಟದ ಹಂಗೇಕೆ ? ಮಾಟದ ಹಂಗೇಕೆ ? ಒಬ್ಬರ ನೊಬ್ಬರು ನೋಡಿ ಮಾಡುವ ಸಮಯಾಚಾರದ ಹಂಗೇಕೆ ? ಅದು ಕಾರಣ ಬಸವರಸ, ಬಸವಪ್ರಭು, ತನ್ನಿಂದ ತನ್ನ ಕಂಡುದರಿಂದ ಮಾಟವಿಲ್ಲದ ಸಮಯಾಚಾರ ಮಾಡ ಹೋದೆ ಬಸವಾ ಎಂದು ಹೇಳಿಹಳು.

***ಆ ಸಮಯಾಚಾರವನರಿದು ಕೂಡಿದೆ ಬಸವ :***

ಬಸವರಸ, ಸಂಯೋಗವಿಯೋಗವಿಲ್ಲದ ನಿಜವನರಿದು ನಿಜದಲ್ಲಿ ನಿಂದ ಬಸವ. ನಿನ್ನ ಸಮಯಾಚಾರವನರಿದುದು ಅದನೆಂತುಸುರುವುದು, ವಿವರಿಸುವುದು, ನೀನು ಲಿಂಗವೆಂಬ ಮಾಟದಿಂದ ಆಗಲಿ, ನಿನ್ನಿರುವಿನಿಂದಾಗಲಿ ಬೇರಾಗದವನು. ಲಿಂಗವೆಂಬ ಮಾಟದಿಂದ ಕೂಡಿ ಒಂದಾಗದವನು. ಇದು ಅಲ್ಲವೆಂದು ಅತಿಗಳೆಯನು. ಇದು ಅಹುದು ಎಂದು ಒಪ್ಪನು, ನೀನು ಸರ್ವಾತ್ಮನೆಂಬುದಕ್ಕೂ ಒಳಪಟ್ಟವನಲ್ಲ. ನೇತಾತ್ಮನೆಂಬುದಕ್ಕೊಳಪಟ್ಟವನಲ್ಲ. ಸಗುಣನಲ್ಲ ನಿರ್ಗುಣನಲ್ಲ, ನುಡಿಗೆಡೆಗೊಡದ ಘನವಂತನಾದುದರಿಂದ ಸಮತೆಯೆ ತನ್ನಿರು ವಾಗಿಹ ತಾನಾಗಿಹ ತನ್ನಿಂದ ತನ್ನ ಕಂಡು ತಾನೆ ತಾನಾದುದು ತನ್ನ ಕೂಡಿದೆ ಬಸವ ಎಂದು ಹೇಳಿಹಳು.

***ಆ ಮಾಟ ಸುಯಿಧಾನವಾಯಿತ್ತಯ್ಯ ಬಸವ :***

ಸಮುವದು ತನ್ನಿರುವಾಗಿಹ, ಸ್ವಸ್ವರೂಪ (ಮಾಟ)ವಾದ್ದರಿಂದ ಎಚ್ಚರವದು ನಿಜದೆಚ್ಚರವಾಯಿತ್ತು. ಇದು ಎಚ್ಚರವಾದವರೆಚ್ಚರವಾಗುವ ಎಚ್ಚರ, ಕೆಡದ ಎಚ್ಚರ, ತನ್ನ ಎಚ್ಚರ ತಾನೆ ಸ್ವಯಂಜ್ಯೋತಿ ಲಿಂಗವಾಗಿಹ ಎಚ್ಚರ, ಇದು ಘನಕ್ಕೆ ಘನವಾದ ಎಚ್ಚರವೆಂದು ಹೇಳಿಹರು.

**ಆ ಸುಯಿದಾನದ ಸುಖವನರಿಯಲು ಸಂಗಯ್ಯನಲ್ಲಿ ಬಸವನೊಂದೆ ರೂಪಾದ :**

ಇದು ತೆರಹಿಲ್ಲದ ನಡೆ, ತೆರಹಿಲ್ಲದ ನುಡಿಯಾದವರ ಎಚ್ಚರದ ಸುಖ, ಇದು ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದ ಕೊಂಡವರ ಎಚ್ಚರದ ಸುಖ, ಎಚ್ಚರವದು ಸುಖ, ಸುಖವದು ಎಚ್ಚರ. ಇಂತಪ್ಪ ಸುಖದ ಸುಖ, ಇದು ಸುಖ, ಸುಖವೆಂದು ಅರಸುವವರ ಸುಖವಲ್ಲ, ನೆನೆವವರ ಸುಖವಲ್ಲ, ಸುಖವೆನ್ನದೆ ಸುಖವಾಗಿಹ ಸುಖ, ನಿರಂತರ ಸುಖ, ಇದುವೆ ತನ್ನಿರುವಾದುದೆ ಸುಖವನರಿದ ಸಂಕೇತ. ಇದು ಸಂಗಯ್ಯನಲ್ಲಿ ಬಸವನೊಂದೆ ರೂಪಾದ ನಿರೂಪ.

ಸಂಗಯ್ಯ ತೆರಹಿಲ್ಲದಭವ, ನುಡಿಗೆಡೆಗೊಡದ ಘನ, ಇತ್ತ ಬಸವರಸನು, ತೆರಹಿಲ್ಲದಭವ, ನುಡಿಗೆಡೆಗೊಡದ ಘನದಿರುವೆ  ತನ್ನದಾದುದರಿಂದ ಸಂಗಯ್ಯನಲ್ಲಿ ಬಸವನೊಂದೆ ರೂಪಾದ. ಒಂದೆ ರೂಪಾದುದು ಶಬ್ದಕ್ಕೆ ತೆರಹಿಲ್ಲವಾದುದು. ಶಬ್ದಮುಗ್ಧವಾದುದು ಅದುವೆ ಸಂಗಯ್ಯನಲ್ಲಿ ಬಸವನೊಂದೆ ರೂಪಾದುದು ಎಂದು ಹೇಳಿಹಳು.

# ಹೆಸರಿಲ್ಲದ ವೃಕ್ಷ

**ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ,**
**ಎನ್ನ ಮಾತಿನ ಪ್ರಸಂಗ ನುಡಿಯಲೊಲ್ಲ ಬಸವಯ್ಯನು.**
**ಮಾತಿನ ಹಂಗು ಹರಿದು ಆ ಪ್ರಸಂಗದ ಸಂಗವ  ಕೆಡಿಸಿ**
**ಪರವಶನಾಗಿ ನಿಲಲು ಬಸವನು,**
**ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನು.**

**ತಾತ್ಪರ್ಯ : ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ, ಎನ್ನ ಮಾತಿನ ಪ್ರಸಂಗ ನುಡಿಯಲೊಲ್ಲ ಬಸವಯ್ಯನು :**

ಆಶ್ಚರ್ಯ, ಮಹದಾಶ್ಚರ್ಯ ಮಾತಿಲ್ಲದ ಲಿಂಗದೇವನಾಗಿಹ ಪತಿಯ ಕೂಡೆ ಮಾತನಾಡಹೋದ ಶರಣಸತಿಯ ಸಂವಾದ ಇಲ್ಲಿ ನೋಡುವ ಸುಸಂಧಿ ಲಭ್ಯವಾದುದು.

ನಮ್ಮ ನಾಡು ಪುಣ್ಯ ನಾಡು. ಇಲ್ಲಿ ಮಾತಿಲ್ಲದವನ ಕೂಡ ಮಾತನಾಡ ಹೋದ ಶರಣ-ಶರಣೆಯರು, ಪವಾಡ ಪುರುಷರಾಗಿ ದೇವನ ಕೂಡ ಮಾತಾಡಿ ಲೋಕದವರನ್ನೆಲ್ಲ ಅಚ್ಚರಿಗೊಳಿಸಿದುದು ಪುರಾಣಂಗಳಲ್ಲಿ ಕಂಡುಬರುವುದು. ಅದರಲ್ಲಿ ಎರಡು ವಿಧದ ಮಾರ್ಗದವರು ದೊರೆಯುವರು. ಒಂದು ನಾಮ ರೂಪುಳ್ಳದೇವನ ಕೂಡ ಮಾತನಾಡ ಹೋದ ಭಕ್ತರುಗಳು ಸಿಕ್ಕುವರು. ಇನ್ನೊಂದು ನಿರೂಪನಾಗಿಹ ಮಾತನಾಡದ ಲಿಂಗದೇವನ ಕೂಡ ಮಾತನಾಡ ಹೋದ ಭಕ್ತರು ಸಿಕ್ಕುವರು.

ಒಂದು ಸಾಂಪ್ರದಾಯ ನಾಮರೂಪದಿಂದುಕ್ತವಾದ ಮಾಯಿಕ ಸಂಪ್ರದಾಯ. ಇದು ಭೇದ ಸಂಪ್ರದಾಯ ಇಲ್ಲಿ ಪೂಜ್ಯ ಪೂಜಕ, ಸ್ವಾಮಿ ಸೇವಕ, ಕೊಡುವ ದಾತಾ, ಕೊಳ್ಳುವ

ದಾಸ. ಹೀಗೆ ಫಲಪದಂಗಳ ಗುರಿಯನ್ನಿಟ್ಟುಕೊಂಡು ಸ್ವಾಮಿ ಸೇವಕಭಾವದಿಂದ ನುಡಿಯುವ ನಡೆಯುವ ಸಾಂಪ್ರದಾಯ. ಇನ್ನೊಂದು ನಿರ್ಮಾಯ ಸಾಂಪ್ರದಾಯ. ಇದು ಶರಣ ಸತಿ, ಲಿಂಗ ಪತಿ ನೋಡಲು ಎರಡಾಗಿ ಕಂಡರೂ ಇದು ಲಿಂಗಾಂಗ ಸಮರಸ ಜ್ಞಾನ, ಜೀವ ಪರ ಮರೇಕತ್ವ ಜ್ಞಾನ. ಇದು ನಿರ್ಮಾಯ ಸಂಪ್ರದಾಯ. ಮಾತಿಲ್ಲದವನ ಕೂಡೆ ಮಾತನಾಡ ಹೋದ ಸಾಂಪ್ರದಾಯ. ಹೃದಯಕ್ಕೆ ಹೃದಯ ಬೆರಗು ಮಾಡುವ ಸಾಂಪ್ರದಾಯಗಳಾಗಿ ಹವು.

ಒಂದು ಮಾಯಿಕವಾದ ಸಾಂಪ್ರದಾಯದಲ್ಲಿ ಶೈವ ಭಕ್ತರು, ವೈಷ್ಣವ ಭಕ್ತರು, ದೇವಿ ಭಕ್ತರು, ನಿರಾಕಾರ ಭಕ್ತರು, ಅದರಲ್ಲಿ ಕೆಲವು ಲಿಂಗವಂತರು ಮಾಯಿಕ ಸಂಪ್ರದಾಯದಲ್ಲಿ ಬರುವರು. ಕೆಲವರು ನಿಜವಾಗಿ ವೀರಶೈವರಾದವರು ನಿರುಪಮ ಭಕ್ತರಾಗಿಹರು. ಇವರುಗಳ ವಿಷಯ ಇಲ್ಲಿ ತೆಗೆದುಕೊಳ್ಳಬೇಕಾದುದಿಲ್ಲ. ಇಲ್ಲಿ ತಿಳಿಸುವ ವಿಷಯವೆ ಬೇರೆಯಾದ್ದರಿಂದ ಮಾಯಿಕ ಭಕ್ತರುಗಳ ವಿಷಯ ಬರೆದಿರುವುದಿಲ್ಲ. ಇಲ್ಲಿ ನಡೆದ ವಿಷಯ ಮಾತಿಲ್ಲದವನ ಕೂಡೆ ಮಾತನಾಡ ಹೋದ ವಿಷಯ ಇಲ್ಲಿಯದಾಗಿಹುದು. ಆಶ್ಚರ್ಯ ಮಾತಿಲ್ಲದವನ ಕೂಡ ಮಾತಾಡುವವರು ಮಾತನಾಡಹೋಗುವದೆಂದರೆ ವಿಪರೀತ ಚಾರಿತ್ರ. ಮೌನವಾಗಿಹ ಲಿಂಗ ಪತಿ! ಮಾತಾಡುವ ಶರಣ ಸತಿ!! ಇವರ ಸಂವಾದ, ಹೃದಯಕ್ಕೆ ಹೃದಯವೆ ಹರ್ಷವಾಗುವ ಸಂವಾದ. ಅರು ಹೃದಯವಾಗುವ ಸಂವಾದ. ಇದು ಶರಣ ಶರಣೆಯರ ಕಾರ್ಯ, ಇದು ಘನ ಕಾರ್ಯ. ಈ ಕಾರ್ಯ ಪ್ರಭುದೇವ, ಬಸವಣ್ಣ, ಚನ್ನಬಸವಣ್ಣ, ಅಕ್ಕ ಮಹಾದೇವಿ, ನೀಲಾಂಬಿಕೆ ಮೊದಲಾದವರು ಈ ಅರುಹೃದಯದ ಕಾರ್ಯ ಮಾಡಿ ಭವಿ ಭಕ್ತರ ಮಾಡಿ, ಪುನಃ ಭಕ್ತರು ಭವಿಯಾಗಿ ತಮ್ಮ ಮಹಾನುಭವದ ವಿಮಾನದಲ್ಲಿ ಕೂತು ಹಾರಾಡುವದು ಮಹದಾಶ್ಚರ್ಯವಾಗಿ ಇಲ್ಲಿ ಕಾಣಬಹುದಾಗಿದೆ.

ಮಾತಿಲ್ಲದವನ ಕೂಡೆ ಮಾತಾಡ ಹೋದಡೆ ಎನ್ನ ಮಾತಿನ ಪ್ರಸಂಗ ನುಡಿಯ ಲೊಲ್ಲ ಬಸವಯ್ಯನು ಎಂದು ನೀಲಮ್ಮ ತಾಯಿ ನುಡಿದುದು ಇದು ಅರುಹೃದಯವಾಗಿ ಮಾತಿಲ್ಲದವನ ಕಂಡು; ತಾನು ಅರು ಹೃದಯವಾಗಿ ಮಾತಾಡಿದುದು ಎಷ್ಟು ಅಚ್ಚರಿಯ ವಿಷಯ! ಮಾತಿಲ್ಲದವನಾರು ? ಮಾತನಾಡ ಹೋದವರು ಆರು ? ನೋಡಲು ಎರಡಾಗಿ ಕಂಡರು ಅರಿದರಿದು ನೋಡುವುಡೆ ಮಾತಿಲ್ಲದವನು ಮಾತಾಡುವವನು. ಈರ್ವರ ಪರಿ ಚಯ ಅವರ ಸಂವಾದದಿಂದ ಪರಿಚಯವಾಗುವ ವಿಷಯ!

ಮಾತಿಲ್ಲದವನು ಮಾತಾಡುವವನು: ಒಬ್ಬನು ಮೂಕ! ಒಬ್ಬನು ವಾಚಾಳಿ! ಇವ ನೆಂಥ ಮೂಕ ? ಇವನೆಂಥ ವಾಚಾಳಿ ಎಂಬ ಪರಮ ರಹಸ್ಯವು ಇದು ಕೇಳದುದ ಕೇಳಿದ ವಿಷಯ! ನೋಡಿರೆ ? ಕೇಳಿರೆ ? ನೋಡದವನನ್ನು ನೋಡಿರೆ ! ಕೇಳದವನ ಕಾಣಿರೆ !

"ಜಗದ್ಭರಿತನೆನ್ನದೇವ, ಜಗವ ಹೊದನೆನ್ನ ದೇವ, ಭಕ್ತನ ಕರ ಕಮಲಕ್ಕೆ ಬಂದನೆನ್ನ ದೇವ, ಭಕ್ತನ ಅವಗ್ರಹಿಸಿಕೊಂಡನೆನ್ನದೇವ, ಕೂಡಲಚೆನ್ನಸಂಗಮ ದೇವಾ." ಅಕ್ಷರಾಕ್ಷರ ಮೀರಿದ ಘನ, ಇದು ಮಾತನಿಲ್ಲದವನಕೂಡೆ, ಮಾತನಾಡ ಹೋಗಿ, ಮಾತಿಲ್ಲದವನ ತೋರಿ ಸುವ ಕಾರುಣ್ಯ ಇಲ್ಲಿ ಕಾಣಬಹುದಾಗಿದೆ. ತಾನು ಮಾತಾಡುವವಳಾಗಿ, ಮಾತಿಲ್ಲದವನ ತೋರಿಸುತ್ತಿಹಳು! ಮಾತಿಲ್ಲದವನು, ಇದ್ದಂತೆ ಇಹನು. ಮಾತಾಡುವವನು ಮಾತಿನ ಪ್ರಸಂಗಕ್ಕೆ ಉತ್ತರಿಸದೆ. ನಿರ್ಲಕ್ಷನಾಗಿ ಇದ್ದಂತೆ ಇಹನು. ಮಾತಿಲ್ಲದವನಿಗೆ, ಮಾತುಗಳು ಸರಿಹೋಗದ್ದ

ಕ್ಕಾಗಿ ಮಾತಾಡದೆ ಸುಮ್ಮನಿಹನೊ? ಅಥವಾ ಮಾತಾಡಿದವನ ಮಾತು ಒಪ್ಪಿಗೆಯಾಗಿ ಮೌನ ವಾಗಿಹನೋ ? ಇದಾರು ನಿರ್ಣಯಿಸುವುದು. ಈ ನಿರ್ಣಯ ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದ ಆರು ಕೊಂಡಿಹರು. ಅಂತಪ್ಪ ಮಹಾಂತರಲ್ಲಿ ಸಿಕ್ಕುವುದು.

ಮಾತಿಲ್ಲದವನಾಗಿ ಇದ್ದಂತಿದ್ದ ಮಹವ ನೋಡಿರೆ ? ಇದು ಪುಸ್ತಕದ ವಿಷಯವಲ್ಲ, ಮಸ್ತಕದಲ್ಲಿ ಅರಿದರಿದು ನೋಡಿದ ವಿಷಯ! ಜಗದ್ಭರಿತನೆಂದರೂ ಮಾತಿಲ್ಲದವನಾಗಿ ಮಾತಾ ಡದಂತಿಹನು. ಜಗವ ಹೊದ್ದವನೆಂದರೂ ಮಾತಾಡದೆ ಇದ್ದಂತೆ ಇಹನು. ಭಕ್ತನ ಕರ ಕಮ ಲಕ್ಕೆ ಬಂದನೆನ್ನ ದೇವನೆಂದರೂ ಮಾತಾಡದೆ ಇದ್ದಂತಿದ್ದು ಮೌನವಾಗಿಹನು. ಭಕ್ತ ನವಗ್ರಹಿಸಿ ಕೊಂಡನೆಂದರೂ ಮಾತಿಲ್ಲದವನಾಗಿ ಇದ್ದಂತಿಹನು. ಇದು ಕಾರಣ ಅಕ್ಷರಾಕ್ಷರ ಮೀರಿದ ಘನನೆಂದು ನುಡಿಗೆಡೆಗೊಡದ ಘನದಿರುವ ಸೂಚಿಸಿಹರು!

ಮಾತಿಲ್ಲದವನ ರಹಸ್ಯವ ನೋಡಿರೆ ? ನಾಮ ರೂಪಕ್ಕೊಳಪಡಿಸಿ ಪೂಜಿಸಿದರೂ ಮೌನವಾಗಿಹನು. ವರ್ಣಿಸಲಿ, ಸ್ತುತಿಸಲಿ, ಸ್ಮರಿಸಲಿ, ಧ್ಯಾನಿಸಿದರೂ ಮಾತಿಲ್ಲದವನಾಗಿ ಇದ್ದಂತೆ ಇಹನು. ಇತ್ತ ಅನುಪಮಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗ ಇದು ಚೈತನ್ಯಲಿಂಗ ವೆಂದು ಅರಿದೆನೆಂಬುವವರಿಗೂ ಮಾತಿಲ್ಲದವನಾಗಿಹನು. ನಾಮ ರೂಪ ಅಲ್ಲ, ಸಚ್ಚಿದ್ರೂಪ ಅಹುದು ಎಂಬ ವಿವೇಕಿಗಳಿಗೂ ಮಾತಿಲ್ಲದವನಾಗಿ ಇದ್ದಂತೆ ಇಹನು. ಇದು ಕಾರಣ ನೀಲಮ್ಮ ತಾಯಿಯು, ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ ಎನ್ನ ಮಾತಿನ ಪ್ರಸಂಗ ನುಡಿಯಲೊಲ್ಲ ಬಸವಯ್ಯನು ಎಂದು ಹೇಳಿಹಳು.

***ಮಾತಿನ ಹಂಗು ಹರಿದು ಆ ಪ್ರಸಂಗದ ಸಂಗವ ಕೆಡಿಸಿ ಪರವಶವಾಗಿ ನಿಲ್ಲಲು ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನು*** :

ಎಂದು ಬಿತ್ತರಿಸಿದುದು ನೋಡುವುಡೆ, ಮಾತಿನ ಹಂಗು ಹರಿಯ ಬೇಕಾದರೆ ಮಾತಿ ಲ್ಲದವನ ತಿಳಿವುದು, ಮಾತಿಲ್ಲದವನ ತಿಳಿದಡೆ ಮಾತಿನ ಹಂಗು ಹರಿವುದು. ಮಾತಿಲ್ಲದವನ ಕೂಡೆ ಮಾತನಾಡ ಹೋದ ಆ ಪ್ರಸಂಗದ ಸಂಗವು ಕೆಡುವುದು. ಆಗ ಮಾತಿಲ್ಲದವನ ಪರ ವಶತೆ ತನ್ನಿರುವಾಗುವುದು.

ಮಾತಿನ ಹಂಗು ಹರಿಯಲು ಮಾತನಳಿವ ಮಾತು ನಷ್ಟ ಮಾಡುವ ರಹಸ್ಯ ತಿಳಿಯ ಬೇಕು. ನಿಶಬ್ದವೇದಿಗಳಾಗಬೇಕು. ಆಗ ಮಾತಿನ ಹಂಗು ಹರಿಯಲು ಬರುವುದು. "ಮಾತನ ಳಿವ ಮಾತ ಬಂದಡೆ ಹೋತಿನಂತೆ ಹೋರಲೇಕೆ ? ಮಾತಿಂಗೆ ಮಣಿದಡಜಾತನೊಲುಮೆ ನಿಃಕಳಂಕ ಮಲ್ಲಿಕಾರ್ಜುನ."

ಮಾತನಳಿವ ಮಾತ ಬಂದವರು. ಶಬ್ದ ನಷ್ಟ ಮಾಡುವವರು. ಶಬ್ದವನ್ನೆ ಕರಗಿಸುವ ವರು. ಮಾತಿಲ್ಲದವ ತಾನಾದುದು; ತಾನು ಅಂದು ಇಂದು ಎಂದೆಂದೂ ಮಾತಿಗೊಳಪಡದ ವನು. ಇದ್ದಂತಿದ್ದ ಮೌನದ ಮೌನ ತಾನೆ, ತನುವಿನ ತನುವಾದವ ತಾನೆ. ಮನದ ಮನವಾ ದವ ತಾನೆ. ಜೀವದ ಜೀವ ತಾನೆ, ಸಕಲ ಶಬ್ದದ ಮರೆಯಲ್ಲಿದ್ದವ ತಾನೆ. ಅರುವಿಂಗರುವಾ ಗಿಹ ಘನ; ಅರಿಯಲಿಲ್ಲದ ಅರುವಾಗಿಹ ಹೃದಯವಾದುದರಿಂದ ಮಾತನಳಿವ ಮಾತ ಬಂದವರು ನಿಶಬ್ದವೇದಿಗಳು, ಅಜಾತನೊಲಿಸಿದವರು. ಇವರದು ತೆರಹಿಲ್ಲದ ನುಡಿ, ತೆರಹಿ ಲ್ಲದ ನಡೆ, ತೆರಹಿಲ್ಲದ ವಿಶ್ರಾಮವಾದುದರಿಂದ ಮಾತಿನ ಹಂಗು ಹರಿದವರು. ಆ ಪ್ರಸಂಗದ ಸಂಗವ ಕೆಡಿಸಿ ಪರವಶವಾಗಿ ನಿಂತ ನಿಲುವು ಆದುದು ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ,

ಅದು ಮಾತಿಲ್ಲದವನ ಕಂಡು ತಾನು ಮಾತಿಲ್ಲದವನಾದುದು. ನೋಡುವವರ ದೃಷ್ಟಿಗೆ ಮಾತಾಡಿದಂತೆ ಕಂಡರೂ ತಾನು ಮಾತಿಲ್ಲದವನಾದುದು. ಇದು ಶರಣರ ನಿರಾಲಂಬತ್ವವು. ಇಲ್ಲಿ ಲಿಂಗ ಆದಿ, ಶರಣ ಅನಾದಿಯಾದುದು ಸಿದ್ಧವಾಗುವುದು.

ಇಂತಪ್ಪ ಅನಾದಿ ಶರಣನುದಯ, ವಿಶ್ವಕ್ಕೆ ಸೂರ್ಯಪ್ರಕಾಶ ಹೇಗೋ ಹಾಗೆ ಭಕ್ತರ ಹೃದಯಕ್ಕೆ ಜ್ಞಾನ ಸುರ್ಯೋದಯ. ಶರಣನಿಲ್ಲದ ದೇಶ, ಅದು ಕಗ್ಗತ್ತಲು; ಭ್ರಾಂತುಳ್ಳದೇಶ. ಅದುವೆ ಭವ. ಈ ಭವ ರೋಗದ ವೈದ್ಯನೆಂದರೆ ಏಕ ಏವ ದೇವ ಶರಣನೊಬ್ಬನೆ. ಇಂತಪ್ಪ ಮಹಾಂತನ ಕೃಪೆಯಿಂದ ಭಕ್ತರುಗಳು ಅರು ಹೃದಯರಾಗಿ ಲಿಂಗಕ್ಕೆ ಲಿಂಗವಾಗಿಹ ತನ್ನಿರುವ ಕಂಡು ಲಿಂಗ ನೋಟದವರಾಗಿ ಲಿಂಗದ ನಡೆಯವರಾಗಿ ಪರವಶದಲ್ಲಿದ್ದ ಹೆಸರಳಿದ ವೃಕ್ಷವ ಕಾಣುವ ಭಾಗ್ಯವಂತರಾಗುವರು.

ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನೆಂದು ಬಿತ್ತರಿಸಿದುದು ನೋಡುವುಡೆ ನರರು, ಸುರರು, ದೇವಗಣ, ರುದ್ರಗಣ, ಪ್ರಮಥಗಣ, ಇತ್ತ ಸ್ಥಾವರ ಜಗವೆಲ್ಲ ಹೆಸರುಳ್ಳ ವೃಕ್ಷವಾಗಿದೆ. ಈ ಹೆಸರುಳ್ಳ ವೃಕ್ಷವೆ ಅರು ಹೃದಯವಾಗಿಹ ಶರಣಂಗೆ ಹೆಸರಿಲ್ಲದ ವೃಕ್ಷವಾಗಿಹುದು. ಕಾಮಣಿ ಬಂದ ಕಣ್ಣಿಗೆ ಜಗವೆಲ್ಲ ಹಚ್ಚಗೆ ಕಂಡು ಬಂದಂತೆ. ವಿಷಯಾಸಕ್ತರ ಕಣ್ಣಿಗೆ ಇಲ್ಲಿ ಕಾಣುವ ಸ್ಥಾವರ ಜಂಗಮ ಜಗತ್ತು ಹೆಸರುಳ್ಳ ವೃಕ್ಷವಾಗಿಹುದು. ಶರಣರ ದಿವ್ಯ ದೃಷ್ಟಿಗೆ ನುಡಿಗೆಡೆಗೊಡದ ಘನವಾಗಿ ಕಂಡುದರಿಂದ ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನೆಂದು ಹೇಳಿಹಳು.

# ಒಳಹೊರಗೆನ್ನದೆ ಪ್ರಜ್ವಲಿಸುವ ಮಾಣಿಕ್ಯ

**ಮುನ್ನಲೊಂದು ಶಿಶು ಹುಟ್ಟಿತ್ತು,**
**ಆ ಶಿಶುವಿನ ಕೈಯಲೊಂದು ಮಾಣಿಕ್ಯವ ಕೊಡಲು**
**ಆ ಮಾಣಿಕ್ಯ ಹಲವು ವರ್ಣವನೆ ತೋರಿ ಬಯಲನೆ**
**ನೆಮ್ಮಿತ್ತು. ಮಾಣಿಕ್ಯದ ಕುರುಹಿಲ್ಲ, ಬಯಲಿಂಗೆ ಬಣ್ಣವಿಲ್ಲ,**
**ಸಂಗಯ್ಯನಲ್ಲಿ ಹೆಸರಳಿದ ಬಸವಂಗೆ.**

**ತಾತ್ಪರ್ಯ : ಮುನ್ನಲೊಂದು ಶಿಶು ಹುಟ್ಟಿತ್ತು :**

ಇದಾವ ಶಿಶು ? ಮರವು ಅರುವುಳ್ಳ ಪ್ರಮಾಣದ ರಕ್ಷಣೆಯ ಶಿಶು ಎನ್ನಲೆ ? ಸಂಗ ಅಸಂಗ ಪ್ರಮಾಣದ ರಕ್ಷಣೆಯ ಶಿಶು ಎನ್ನಲೆ ? ಸಾಕಾರ ನಿರಾಕಾರವೆಂಬ ಪ್ರಮಾಣಂಗಳ ರಕ್ಷಣೆಯ ಶಿಶು ಎನ್ನಲೆ ? ಅಂಗಾಂಗದ ರಕ್ಷಣೆಯ ಶಿಶು ಎನ್ನಲೆ ? ತ್ಯಾಗಾಂಗ ಭೋಗಾಂಗ ಯೋಗಾಂಗಗಳೆಂಬ ತ್ರಿವಿಧ ಸಂಗದ ಶಿಶು ಎನ್ನಲೆ ? ಅಹುದು ಅಲ್ಲವೆಂಬ ಮತಿಗತಿಯ ಶಿಶು ಎನ್ನಲೆ ? ಅಲ್ಲಲ್ಲ ಇವೆಲ್ಲವುಗಳ ಮುನ್ನಲೊಂದು ಶಿಶು ಹುಟ್ಟಿತ್ತು.

ಆಶ್ಚರ್ಯ ಇದಾವ ಕಾರಣಕ್ಕಾಗಿ ಹುಟ್ಟಿದುದು ? ಬಂಧನದ ಕಾರಣಕ್ಕಾಗಿ ಹುಟ್ಟಿದ ಶಿಶು ಅಲ್ಲ. ಮೋಕ್ಷದ ಕಾರಣಕ್ಕಾಗಿ ಹುಟ್ಟಿದ ಶಿಶುವು ಅಲ್ಲ, ಕಾರಣವಿಲ್ಲದೆ ಹುಟ್ಟಿದ ಶಿಶು; ಇದೆಂಥ ಸೋಜಿಗ ಶಿಶು! ಓಹೊ ! ಕಾರಣವಿದೆ. ಅದಾವ ಕಾರಣ, ಪ್ರಮಾಣದ ಕಾರಣವೆ ? ಶೃತಿ ಪ್ರಮಾಣದ ಕಾರಣಕ್ಕಾಗಿ ಬಂದುದಲ್ಲ, ಶೃತಿಗಗೋಚರವಾಗಿಹ ಅಪ್ರಮಾಣದ ಕಾರ

ಣಕ್ಕಾಗಿ ಬಂದ ಶಿಶು. ಇದು ಅಪ್ರಮಾಣದ ರಕ್ಷಣೆಗಾಗಿ ಮುನ್ನಲೊಂದು ಶಿಶು ಹುಟ್ಟಿತ್ತು ! ಇಂತಪ್ಪ ಪರಮ ರಹಸ್ಯದಾಸೆಯಿಂದ ಹುಟ್ಟಿದ ಕೂಸು ಬೆಳಗಿಂಗೆ ಬೆಳಗಾಗಿಹ ಇರುವಿನ ಮಹದಾನಂದದಲಕ್ಕಾಡಲು ಬಂದ ಕೂಸು. ಇದು ವಿಪರೀತ ಚಾರಿತ್ರದ ಕೂಸು ಆದುದ ರಿಂದ ಮುನ್ನಲ್ಲೊಂದು ಶಿಶು ಹುಟ್ಟಿತ್ತು.

***ಆ ಶಿಶುವಿನ ಕೈಯಲ್ಲೊಂದು ಮಾಣಿಕ್ಯವ ಕೊಡಲು ಆ ಮಾಣಿಕ್ಯ ಹಲವು ವರ್ಣವನೆ ತೋರಿ ಬಯಲನೆ ನೆಮ್ಮಿತ್ತು*** :

ಮುನ್ನಲೊಂದು ಶಿಶು ಹುಟ್ಟಿತ್ತು. ಆ ಶಿಶುವಿನ ಕೈಯಲೊಂದು ಮಾಣಿಕ್ಯ ಕೊಟ್ಟುದು ಅದಾವ ಮಾಣಿಕ್ಯ ? ಕುರುಹಿಲ್ಲದ ಮಾಣಿಕ್ಯವ ಕೈಯ ಕೈಯಾಗಿಹ ಕೈಯಿಂದ ಮಾಣಿಕ್ಯವ ಹಿಡಿದುದು ಇದೆಂಥ ಸೋಜಿಗ ? ಕುರುಹಿಲ್ಲದ ಮಾಣಿಕ್ಯ ಕಂಡುದು ಹೇಗೆ ? ಅದನ್ನು ಕೈಯ, ಕೈಯಾಗಿಹ ಕೈಯಿಂದ ಹಿಡಿದುದು ಹೇಗೆ ?

ಕುರುಹಿಲ್ಲದ ಮಾಣಿಕ್ಯ ಕಂಡುದು ಹೇಗೆ ? ಕಣ್ಣಿನ ಕಣ್ಣಾಗಿ ನೋಡಿತ್ತು ನೋಡಾ ! ಮಾಣಿಕ್ಯ ! ಅರುವಿಂಗರುವಾಗಿಹ ಮಾಣಿಕ್ಯ ಅರುವೆನ್ನದ ಶಬ್ದ ಮುಗ್ಧವಾಗಿಹ ಮಾಣಿಕ್ಯ. ಸಾವಯವ, ನಿರವಯ ತನ್ನೊಳಡಗಿಸಿಕೊಂಡ ಮಾಣಿಕ್ಯ. ಸ್ಪಟಿಕದ ಘಟದ ಜ್ಯೋತಿಯಂತೆ ಒಳ ಹೊರಗೆನ್ನದೆ ಪ್ರಜ್ವಲಿಸುವ ಮಾಣಿಕ್ಯ. ಇದು ಅರಿಯಬಾರದ ಘನವಾಗಿಹ ಮಾಣಿಕ್ಯ. ಇದು ಅರಿಯಲಿಲ್ಲದ ಅರುವಾಗಿಹ ಮಾಣಿಕ್ಯ. ಇಂತಪ್ಪ ಮಾಣಿಕ್ಯ ಕೈಯಲ್ಲಿ ಕೊಡಲು ಹಲವು ವರ್ಣನೆ ತೋರಿ ಬಯಲನೆ ನೆಮ್ಮಿತ್ತು.

ಅರಿಯಬಾರದ ಘನವಾಗಿಹ ಮಾಣಿಕ್ಯ ಕೈಯಲ್ಲಿ ಕೊಡಲು ಅದು ಹಲವು ವರ್ಣನೆ ಯಾಗಿ ತೋರಿದುದು ನೋಡಿರೆ ? ಅದುವೆ ತೆರಹಿಲ್ಲದ ಲಿಂಗಭರಿತವೆಂಬ ವರ್ಣನೆಯಾ ಯಿತ್ತು ನೋಡಿರೆ ? ಅರಿದರಿದು ನೋಡಲು ನಾಮ ನಿರ್ನಾಮವಾಯಿತ್ತು ನೋಡಿರೆ ? ಲಿಂಗ ಒಂದಾಗಿರ್ದ ಜಂಗಮವಾಯಿತ್ತು. ಜಂಗಮ ಒಂದಾಗಿರ್ದ ಲಿಂಗವಾಯಿತ್ತು, ನಿರುಪ ಮವಾಯಿತ್ತು, ನಿರಾಲಂಬವಾಯಿತ್ತು ಶುದ್ಧ ಶಿವೈಕ್ಯವೆಂಬ ವರ್ಣನೆಯಾಗಿ ತೋರಿತ್ತು ನೋಡಿರೆ ?

ಬಯಲನೆ ನೆಮ್ಮಿತ್ತು, ಬಯಲನೆ ಆಶ್ರಯಸಿತ್ತು. ಇದನೇನೆಂಬೆ, ನಿರವಧಿಯನೆ ನೆಮ್ಮಿತ್ತು. ಅನಂತನ ನೆಮ್ಮಿತ್ತು. ತುಂಬಿದುದು ತುಂಬಿದಂತೆ ಇದ್ದುದು ಇದನಾರಯ್ಯ ಬಲ್ಲ ವರು ? ಇದು ಅರಿಯಲಿಲ್ಲದ ಅರುವ ಅವಗ್ರಹಿಸಿ ಆವಾವುದನ್ನು ಅರಿಯದಾಯಿತ್ತು. ತನ್ನಿ ರುವ ಮರೆಯದಾಯಿತ್ತು. ತನ್ನಿರುವ ಮರೆಯದ ಘನವನೇನೆಂಬೆ ? "ಆರು ಕೋಟಿ ಬ್ರಹ್ಮರು ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ಹಲವು ರುದ್ರಾವತಾರವಳಿದಲ್ಲಿ ಕೂಡಲಸಂಗ ಮದೇವ ಏನೊಂದು ಅರಿಯದೆ ಇದ್ದನು." ತನ್ನಿರುವ ಮರೆಯದ ಘನ, ಅದು ಆವಾವುದು ಅರಿಯದ್ದರಿಂದ ಆರು ಕೋಟಿ ಬ್ರಹ್ಮರು, ನಾರಾಯಣರೊಂದು ಕೋಟಿ ಇತ್ತ ಹಲವು ರುದ್ರಾವತಾರ ಅಳಿದರೂ ಅರಿಯಲಿಲ್ಲ, ಅರಿಯಲಿಲ್ಲದ ಅರುವ ಸ್ವೀಕರಿಸಿ ತನ್ನಿರುವ ಮರೆ ಯಲಿಲ್ಲವಾದ್ದರಿಂದ ಬಯಲನೆ ನೆಮ್ಮಿತ್ತು ಎಂದು ಹೇಳಿಹಳು.

**ಮಾಣಿಕ್ಯದ ಕುರುಹಿಲ್ಲ, ಬಯಲಿಂಗೆ ಬಣ್ಣವಿಲ್ಲ, ಸಂಗಯ್ಯನಲ್ಲಿ ಹೆಸರಳಿದ ಬಸ ವಂಗೆ:**

ಮಾಣಿಕ್ಯದ ಕುರುಹಿಲ್ಲ, ಕುರುಹಿನ ಮಾಣಿಕ್ಯ ಕಂಡವರುಂಟು. ಕುರುಹಿಲ್ಲದ ಮಾಣಿಕ್ಯ

ಕಂಡವರುಂಟೆ ? ಇದು ಹಠಯೋಗಿಗಳಿಗೂ ಕಾಣದ ಮಾಣಿಕ್ಯ ಅಣಿಮಾದಿ ಸಿದ್ಧಿ ಪುರುಷರಿಗೂ ಕಾಣದ ಮಾಣಿಕ್ಯ ಜಗದಭಿಮಾನಿಗಳಾಗಿಹ ಜಗದೊಡೆಯರಿಗೂ ಕಾಣದ ಮಾಣಿಕ್ಯ. ಇದು ಗುರುವಿಂಗೆ ಗುರುವಾಗಿಹ ಗುರುಲಿಂಗರೂಪಿ ಮಾಣಿಕ್ಯ. ಲಿಂಗಕ್ಕೆ ಲಿಂಗವಾಗಿಹ ಸ್ವಯಲಿಂಗರೂಪಿ ಮಾಣಿಕ್ಯ. ಜಂಗಮಕ್ಕೆ ಜಂಗಮವಾಗಿಹ ನಿರ್ಲಿಖಿತ ಜಂಗಮರೂಪಿ ಮಾಣಿಕ್ಯ. ಅಂತರಂಗ ಬಹಿರಂಗವೆನ್ನದೆ ಅರುವಿಂಗರುವಾಗಿಹ ಮಾಣಿಕ್ಯ, ಇಂತಪ್ಪ ಮಹಾ ಘನವೆ ಮಾಣಿಕ್ಯವಾದ್ದರಿಂದ ಮಾಣಿಕ್ಯಕ್ಕೆ ಕುರುಹಿಲ್ಲವೆಂದು ಹೇಳಿಹಳು.

ಬಯಲಿಂಗೆ ಬಣ್ಣವಿಲ್ಲ. ಜಡವಾದ ಬಯಲಿಂಗೆ ಬಣ್ಣವಿಲ್ಲದಿರುವಾಗ ಬಯಲೆನ್ನಲು ಬಾರದೆ ಶಬ್ದಮುಗ್ಧವಾಗಿಹ ನಿಜಚೈತನ್ಯಕ್ಕೆ ಅದಾವ ಬಣ್ಣ ತರುವುದು. ಬಯಲೆಂಬುದು ವ್ಯಾಪಕ, ಅದು ಸದ್ರೂಪವಾಗಿಹ ವ್ಯಾಪಕ. ಚಿದ್ರೂಪವಾಗಿಹ ವ್ಯಾಪಕ ಮತ್ತಾನಂದ ರೂಪವಾಗಿಹ ವ್ಯಾಪಕ. ಅದು ಅಂದು, ಇಂದು, ಎಂದೆಂದೂ ಇದ್ದಂತೆ ಇದ್ದ ಅಭೇದ್ಯವಾಗಿಹ ವ್ಯಾಪಕ. ತೆರಹಿಲ್ಲದ ಪರಿಪೂರ್ಣವಾಗಿಹ ಘನದಿರುವೆ ಬಯಲಾಗಿಹ ಬಯಲಿಂಗೆ ಅದಾವ ಬಣ್ಣತರುವುದು.

ಸಂಗಯ್ಯನಲ್ಲಿ ಹೆಸರಳಿದ ಬಸವಂಗೆ, ಸಂಗಯ್ಯನೆಂಬುದಕ್ಕೂ ತೆರಹಿಲ್ಲದೆ ಭರಿತವಾದುದರಿಂದ ಅಂತಪ್ಪ ಭರಿತವೆಂಬುದಕ್ಕೂ ತೆರಹಿಲ್ಲವಾದುದರಿಂದ ನಿರ್ಭರಿತದಲ್ಲಿ ಹೆಸರಳಿದ ಬಸವಂಗೆ ಎಂದು ಹೇಳಿಹಳು.

# ಒಂದು ಬಿಟ್ಟು ಒಂದು ಹಿಡಿಯುವುದೆ ಲಕ್ಷ

**ಲಕ್ಷದ ಮೇಲೆ ತೊಂಭತ್ತಾರು ಸಾವಿರ**
**ಜಂಗಮಕ್ಕೆ ಮಾಡುವ ಮಾಟವಳಿಯಿತ್ತು ಬಸವಾ.**
**ಇಂದಿಗೆ ಊಟವಳಿಯಿತ್ತು ಬಸವಾ,**
**ಇಂದಿಂಗೆ ಅವರ ಸಂಗವಳಿದು**
**ನಿರಾಲಂಬ ಮೂರ್ತಿಯ ಇರವು ಕಾಣಿಸಿತ್ತಯ್ಯ ಬಸವಾ,**
**ಸಂಗಯ್ಯಾ ಬಸವನ ರೂಪು ಎನ್ನಲ್ಲಿ ಅಡಗಲು.**

***ತಾತ್ಪರ್ಯ : ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವಳಿಯಿತ್ತು ಬಸವಾ, ಇಂದಿಗೆ ಊಟ ವಳಿಯಿತ್ತು ಬಸವಾ :***

ಇದಾರ ದೃಷ್ಟಿ? ನೀಲಮ್ಮ ತಾಯಿಯ ದಿವ್ಯ ದೃಷ್ಟಿ ಮಾಡುವ ಮಾಟ ನಷ್ಟವಾದ ದೃಷ್ಟಿ; ಊಟವಳಿದ ದಿವ್ಯ ದೃಷ್ಟಿ ಇದಾರಿಗೆ ? ಪೂರ್ವದಲ್ಲಿ ಮಾಡುವ ಮಾಟವಿದ್ದುದು ನಿಜ. ಒಂದಲ್ಲ, ಎರಡಲ್ಲ, ಹತ್ತಲ್ಲ, ನೂರಲ್ಲ, ಸಾವಿರವೂ ಅಲ್ಲ, ತೊಂಭತ್ತಾರು ಸಾವಿರ ಇದು ಅಲ್ಲ, ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟ. ಇವರುಗಳು ಉಪಾಧಿ ಜಂಗಮರನ್ನಾಗಿ ಮಾಡುವ ಮಾಟ, ಜಂಗಮ ದೇವಯ್ಯರನ್ನಾಗಿ ಕಾಣುವ ಮಾಟವಿದ್ದುದರಿಂದ ಊಟವಿದ್ದುದು ಆಗಿತ್ತು.

"ಬಿಟ್ಟು ಮಹೇಶನಾದೆನೆಂಬುದು ನಿಜದ ಕೇಡು. (ಅರುವಿನ ಕೇಡು) ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು. ಬಿಡುವುದು, ಹಿಡಿವುದು ಮನ ಕಲ್ಪಿತವಲ್ಲದೆ ಕಲ್ಪನಾರಹಿತ

ಭಕ್ತ ಮಹೇಶ್ವರರಲ್ಲಿಪ್ಪುದೇನಯ್ಯ? ಕಪಿಲಸಿದ್ಧ ಮಲ್ಲಿಕಾರ್ಜುನ" ಎಲ್ಲಿಯವರೆಗೆ ಕಲ್ಪಿತದೃಷ್ಟಿಯುಳ್ಳವರಾಗಿದ್ದುದಾಗಿತ್ತು ಅಲ್ಲಿಯವರೆಗೆ ಬಿಟ್ಟು ಮಹೇಶರಾದವರು ಶ್ರೇಷ್ಠರಾಗಿದ್ದರು. ಹಿಡಿದು ಭಕ್ತರಾಗಿ ತಾವು ಕಿರಿದಾಗಿದ್ದರು. ಇದು ಮನಸ್ಸಿನ ಕಾರ್ಯ, ಕಲ್ಪನಾರಹಿತರು ಆರು ಅವರು ನಿಜದಲ್ಲಿ ನಿಂದವರು ಮತ್ತು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪ ಭಕ್ತ ಹಿಡಿದು ಭಕ್ತನಾದುದಿಲ್ಲ.

ಆರ ದೃಷ್ಟಿ ಕಲ್ಪಿತವಾಗಿದೆ ಅಲ್ಲಿ ಬಿಟ್ಟು ಮಹೇಶರಾಗಿಹ, ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಯ್ಯಗಳು ಇದ್ದುದು ನಿಜ. ಭಕ್ತನಾದವನು ಅವರ ವಾದ ಹಿಡಿದು ಭಕ್ತನಾದುದು ನಿಜ. ಇವರುಗಳು ಬಿಟ್ಟು ಮಹೇಶರಾದರೂ ಅರುವಿಂಗೆ ದೂರವಾದರು. ಇತ್ತ ಹಿಡಿದು, ಭಕ್ತರಾಗಿದ್ದರೂ ನಿಜದಿರುವಿನಿಂದ ದೂರವಾದರು.

ನೀಲಮ್ಮ ತಾಯಿ ನಿಜವರಿತು ನಿಜವೆನ್ನದ ನಿಜೈಕ್ಯಳು ಲಿಂಗೈಕ್ಯಳು ಆಗಿರುವಲ್ಲಿ ಈ ಲೋಕದ ಗಮನಿ ಜಂಗಮರ ದೃಷ್ಟಿ ನಷ್ಟವಾಗಿದೆ. ಇತ್ತ ತಾನು ಇವರ ಪಾದ ಹಿಡಿದು ಭಕ್ತನಾದೆನೆಂಬ ದೃಷ್ಟಿ ನಷ್ಟವಾಗಿದೆ. ಕಾರಣ ಈಗ ಕಲ್ಪಿತ ದೃಷ್ಟಿ ಇಲ್ಲ. ನೆನೆವ ಮನವೂ ಇಲ್ಲ. ಮನವು ಇದ್ದಲ್ಲಿ ಮರಹು ಇದೆ. ಮರವು ಇದ್ದಲ್ಲಿ ಹಿಡಿವುದು ಇದೆ. ಬಿಡುವುದು ಇದೆ. ಕಲ್ಪನಾರಹಿತರಾಗಿರುವಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವು ಅಳಿಯಿತ್ತು ಬಸವಾ. ಇಂದಿಗೆ ಊಟವಳಿಯಿತ್ತು ಬಸವಾ ಎಂದು ಬಿತ್ತರಿಸಿದುದು ನೋಡಿದಡೆ ಈ ಮಹಾಶಕ್ತಿಯ ದಿವ್ಯದೃಷ್ಟಿ ಅದಾರಿಗೆ ?

ಲಕ್ಷ ಎರಡುಂಟು. ಒಂದು ಬಿಟ್ಟು, ಒಂದು ಹಿಡಿಯುವುದಾಗಿದೆ. ಮತ್ತೊಂದು ಹಿಡಿಯಬಾರದು. ಬಿಡಬಾರದು. ನೀಲಮ್ಮ ತಾಯಿಯ ದಿವ್ಯದೃಷ್ಟಿ ಲಿಂಗೈಕ್ಯ ದೃಷ್ಟಿ ಕಲ್ಪಿತ ದೃಷ್ಟಿ ಹಿಡಿದವಳಲ್ಲ. ಕಲ್ಪನಾರಹಿತ ದೃಷ್ಟಿ ಬಿಟ್ಟವಳಲ್ಲ. ಕಲ್ಪನಾರಹಿತ ದೃಷ್ಟಿ ಅದು ಸ್ವತೇಜವಾಗಿದೆ. ಘನಕ್ಕೆ ಘನವಾಗಿದೆ. ಬೆಳಗಿಂಗೆ ಬೆಳಗಾಗಿಹ ಸ್ವತೇಜವಾಗಿದೆ. ಇಂತಪ್ಪ ಸ್ವತೇಜವಾಗಿಹ ಮಹಾಶಕ್ತಿಗೆ ಉಪಾಧಿ ದೃಷ್ಟಿ ನಷ್ಟವಾದುದರಿಂದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮರೆಂಬುದು ಅಜಾತ ಲಿಂಗ ತಾನಾದ ಚಾರಿತ್ರ. ಇದು ವಿಪರೀತ ಚಾರಿತ್ರ. ಮಹಾಕಾಲದಲ್ಲಿ ನಿಮ್ಮಿಂದ ನೀವೆ ಆಗಿರ್ದಿರಲ್ಲ ಒಂದನಂತ ಕಾಲ ಮಹವು ಮಹದಾನಂದದಲಕ್ಕಾಡಲು ಬಂದ ಸ್ವಯಂಭುವಾಗಿರ್ದುದು ನೋಡಾ ಎಂಬ ದಿವ್ಯದೃಷ್ಟಿ ನೀಲಮ್ಮ ತಾಯಿಯದು ಆಗಿರುವಲ್ಲಿ ಪೂರ್ವದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಯ್ಯಗಳ ದೃಷ್ಟಿಯು ನಷ್ಟವಾಗಿಹುದು. ಇತ್ತ ತಾನು ಕಿರಿ ಕಿರಿದಾಗಿ ಅವರ ಪಾದ ಹಿಡಿದು ಮಾಡುವ ಭಕ್ತಳ ಕಾರ್ಯವು ನಷ್ಟವಾಗಿಹುದು ಇದು ಕಾರಣ.

ಪೂರ್ವಿಕ ದೃಷ್ಟಿ ಅಪೂರ್ವಿಕ ದೃಷ್ಟಿ ಎರಡುಂಟು. ಪೂರ್ವಿಕ ದೃಷ್ಟಿ ಪೂರ್ವಾಶ್ರಯ ಹಿಡಿದ ದೃಷ್ಟಿ ಇವರ ಲಕ್ಷ ಪೂರ್ವಾಶ್ರಯ ಹಿಡಿದ ಲಕ್ಷ್ಯ, ವರ್ಣಾಶ್ರಮಂಗಳ ಒಪ್ಪಿಗೆಯಾಗಿ ವರ್ಣಾಶ್ರಮಂಗಳೆ ತಾವಾದ ಲಕ್ಷ್ಯ. ತೊಂಭತ್ತಾರು ಅಂಗಲುವುಳ್ಳ ಲಕ್ಷ್ಯ. ಇದು ಸಾವಿನಿಂದುಕ್ತವಾದ ಲಕ್ಷ್ಯ. ಇಂತಪ್ಪ ಪೂರ್ವದ ಲಕ್ಷವುಳ್ಳ ಪೂರ್ವಾಶ್ರಮ ಜಂಗಮರಾದುದರಿಂದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವಿತ್ತು. ಈಗ ಈ ಪೂರ್ವಿಕ ದೃಷ್ಟಿ ನಷ್ಟವಾಗಿ ಅಪೂರ್ವಿಕ ದೃಷ್ಟಿ ನನ್ನ ನಿಜದೃಷ್ಟಿಯಾದುದರಿಂದ ವಿಪರೀತ ಚಾರಿತ್ರ ದೃಷ್ಟಿ ನನ್ನದಾಗಿಹುದರಿಂದ ನಿಮ್ಮಿಂದ ನೀವೆ ಆಗಿರ್ದ ಸ್ವಯಂಭುವಾದ್ದರಿಂದ ನಾವುಗಳೆಲ್ಲರೂ

ಮಹವು ಮಹದಾನಂದದಲಕ್ಕಾಡಲು ಬಂದ ಸ್ವಯಂಜ್ಯೋತಿ ಲಿಂಗವಾದುದರಿಂದ ಪೂರ್ವಾಶ್ರಯ ಆರಿಗೂ ಇಲ್ಲ, ಇಲ್ಲವಾದುದರಿಂದ ನೀವು ಜಂಗಮಯ್ಯಗಳಾದುದು ಸಟೆ. ಇತ್ತ ನಾವು ನಿಮ್ಮ ಪಾದ ಹಿಡಿದು ಭಕ್ತರಾದುದು ಸಟೆಯಾದುದರಿಂದ, ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವಳಿಯಿತ್ತು ಬಸವಾ. ಇಂದಿಗೆ ಊಟವ ಳಿಯಿತ್ತು ಬಸವಾ ಎಂದು ಹೇಳಿಹಳು.

***ಇಂದಿಗೆ ಅವರ ಸಂಗವಳಿದು ನಿರಾಲಂಬ ಮೂರ್ತಿ ಇರವು ಕಾಣಿಸಿತ್ತಯ್ಯ ಬಸವಾ :***

ನಿರಾಲಂಬ ಮೂರ್ತಿ ಇರವು ಕಾಣಿಸಿದುದು ಇದನೇನೆಂಬೆ? ಶುದ್ಧಪ್ರಸಾದ, ಸಿದ್ಧಪ್ರ ಸಾದ, ಪ್ರಸಿದ್ಧ ಪ್ರಸಾದವರಿತು. ತನ್ನೊಳಗೆ ಕಂಡ ನಿರಾಲಂಬ ಮೂರ್ತಿ ಇರವು ಏನೆಂಬೇ ನೆಂಬೆ. ಇದು ತನ್ನದಾದ ಇರವು. ನಿರಂತರ ಮಂಗಲಮಯವಾಗಿಹ ಇರವು. ಇಂತಪ್ಪ ಮಹ ದಿರುವು ಸಕಲ ಆಧ್ಯಾತ್ಮ ಜ್ಞಾನಿಗಳಿಗೆ ಇಲ್ಲವೇನೊ ಎಂಬಂತೆ ಚೆನ್ನಬಸವಣ್ಣನವರ ವಚನದಿಂದ ಕಂಡುಬಂದಂತಾಗುವುದು ನೋಡಿ:

"ನಿರಾಲಂಬದಲ್ಲಿ ನಿಜಲಿಂಗ ನಾನೆಂಬ ಮಹದಹಂಕಾರವಿದೇನೋ ? ಈ ಅಹಂಕಾರವೆ ಸಂಸಾರವಾಗಿ ತೊಳಲುವುದು ಬಳಲುವುದು ಇದೇನೊ ? ಇದನಾರಯ್ಯ ಪರಿಹರಿಸುವುದು ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನಲ್ಲದೆ ಮತ್ತಾರನೂ ಕಾಣೆನಯ್ಯ" ಎಂದು ಬಿತ್ತರಿಸಿ ದುದು ನೋಡಿದಡೆ ನಿರಾಲಂಬದ ರಹಸ್ಯ ಬಸವಯ್ಯನಿಗೆ ವಿದಿತವಿದ್ದುದರಿಂದ ಅಂತಪ್ಪ ಮಹಾಂತನ ಮಹಾನುಭವ ನೀಲಮ್ಮ ತಾಯಿಗೂ ವೇದ್ಯವಾದುದರಿಂದ ನಿರಾಲಂಬ ಮೂರ್ತಿಯ ಇರವು ಕಾಣಿಸಿತ್ತಯ್ಯ ಎಂದು ಹೇಳಿಹಳು.

***ಸಂಗಯ್ಯ ಬಸವಯ್ಯನ ರೂಪು ಎನ್ನಲ್ಲಿ ಅಡಗಲು :***

ಓ ! ತೆರಹಿಲ್ಲದಭವನಾಗಿಹ ಸಂಗಯ್ಯನೆ ? ನುಡಿಗೆಡೆಗೊಡದ ಘನನಾಗಿಹ ಸಂಗ ಯ್ಯನೆ, ಬಸವಯ್ಯನ ರೂಪು ಇದು ನಿರೂಪ ರೂಪು. ಇದು ನಿರೂಪದ ಮಾಟ, ನಿರೂಪದ ಕೂಟ, ನಿರೂಪದ ಸದ್ಭಕ್ತಿ ಎನ್ನಲ್ಲಿ ಅಡಗಿಹುದರಿಂದಲೇ ಎನ್ನಲ್ಲಿ ಅಡಗಲು ಎಂದು ಹೇಳಿಹ ಳು.

# ಹುಟ್ಟು ಸಾವುಗಳಿಲ್ಲದ ಅರಿವಿನ ದರ್ಶನ

**ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಯ್ಯ,**
**ನಟ್ಟ ನಡು ಗ್ರಾಮವ ಕೆಡಿಸಿ ಹೋದಿರಿ ಬಸವಯ್ಯ,**
**ಹುಟ್ಟಿಲ್ಲದೆ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಯ್ಯ,**
**ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಯ್ಯ,**
**ಸಂಗಯ್ಯನಲ್ಲಿ ನೀನೆಂತಪ್ಪ ಮಹಿಮನಯ್ಯ ಬಸವಯ್ಯ.**

**ತಾತ್ಪರ್ಯ : *ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಯ್ಯ :***

ಓ ! ಬಸವರಸ, ನೀ ನಿಲ್ಲದ ಸ್ಥಾನವದು ಅಟ್ಟಡವಿ. ನಿಮ್ಮ ಶರಣರು ಇಲ್ಲದ ಸ್ಥಾನ ಅಟ್ಟಡವಿ. ನಿಮ್ಮ ಗಣ ತಿಂಥಣಿ ಇಲ್ಲದ ಪ್ರದೇಶವದು ಅಟ್ಟಡವಿ. ನಿಮ್ಮ ಮಹಾನುಭಾವ

ನಡೆಯದ ಸ್ಥಾನ ಅಟ್ಟಡವಿ. ಲಿಂಗಾಂಗ ಸಾಮರಸ್ಯ ಜ್ಞಾನಕ್ಕವಕಾಶವಿಲ್ಲದ ಸ್ಥಾನ ಅಟ್ಟಡವಿ. ನಿಃಶಬ್ದವೇದಿಗಳಿಲ್ಲದ ಸ್ಥಾನವದು ಅಟ್ಟಡವಿ. ಲಿಂಗೈಕ್ಯ ಶರಣರಿಲ್ಲದ ಸ್ಥಾನವದು ಅಟ್ಟಡವಿ. ಪರತತ್ವ ನಿಜಸಂಯುಕ್ತರಿಲ್ಲದ ಸ್ಥಾನವದು ಅಟ್ಟಡವಿ. ಆನು ನೀನೆನ್ನದಿಹ ಶಬ್ದಸುಖಿಗಳಿಲ್ಲದ ಸ್ಥಾನವದು ಅಟ್ಟಡವಿ. ಇಂತಪ್ಪ ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಯ್ಯ ಎಂದು ಹೇಳಿಹಳು.

***ನಟ್ಟ ನಡು ಗ್ರಾಮವ ಕೆಡಿಸಿ ಹೋದಿರಿ ಬಸವಯ್ಯ*** :

ನಟ್ಟ ನಡು ಗ್ರಾಮವದು. ನರರು, ಸುರರು ಮೊದಲಾದವರು ವಾಸಿಸಿದುದು ನಟ್ಟ ನಡು ಗ್ರಾಮ. ಪಿಂಡವೆಂಬುದು ನಟ್ಟ ನಡು ಗ್ರಾಮ. ಮರವರುವೆಂಬುದು ನಟ್ಟ ನಡು ಗ್ರಾಮ. ಬ್ರಹ್ಮಾಂಡವೆಂಬುದು ನಟ್ಟ ನಡು ಗ್ರಾಮ. ನುಡಿಗೊಳಪಟ್ಟುದು ನಡು ಗ್ರಾಮ. ನೆನಹಿಂಗೊಳಪಟ್ಟುದು ನಟ್ಟ ನಡು ಗ್ರಾಮ. ನಿರ್ಣಯಕ್ಕೊಳಪಟ್ಟುದು ನಟ್ಟ ನಡು ಗ್ರಾಮ. ಬಂಧ ಮೋಕ್ಷವೆಂಬುದು ನಟ್ಟ ನಡು ಗ್ರಾಮ. ಅಹುದು ಅಲ್ಲವೆಂಬುದು ನಟ್ಟ ನಡು ಗ್ರಾಮ. ಸೀಮಿತಕ್ಕೊಳಪಟ್ಟುದು ನಟ್ಟ ನಡು ಗ್ರಾಮ. ಆನು ನೀನೆಂಬುದು ನಟ್ಟ ನಡು ಗ್ರಾಮ. ಅರಿತೆ ಅರಿಯೆನೆಂಬುದು ನಟ್ಟ ನಡು ಗ್ರಾಮ. ಬೋಧ-ಅಬೋಧ ಬೋಧಾಬೋಧ ಮಿಶ್ರ ಇವು ಮೂರು ನಟ್ಟ ನಡು ಗ್ರಾಮ. ಇಂತಪ್ಪ ನಟ್ಟ ನಡು ಗ್ರಾಮವ ಕೆಡಿಸಿ ಹೋದಿರಿ ಬಸವಯ್ಯ. ಏಕೆಂದರೆ ನಿಮ್ಮ ದಿವ್ಯ ದೃಷ್ಟಿಗೆ ರೂಪಿಂಗೆ ಮಹತ್ವವಿಲ್ಲ, ನಾಮಕ್ಕೆ ಮಹತ್ವವಿಲ್ಲ, ಮಾತು ಮನಂಗಳಿಗೆ ಮಹತ್ವವಿಲ್ಲ.

ಕಾಯ ನಾನೆಂಬ ಕರ್ಮಕಾಂಡಿಗಳಿಗೂ ಮಹತ್ವವಿಲ್ಲ. ಈಶಾರ್ಪಣ ಮಾಡುವ ಭಕ್ತ ಕಾಂಡದವರ ನಟ್ಟನಡು ಗ್ರಾಮವ ಕೆಡಿಸಿ ಹೋದಿರಿ. ಇದಲ್ಲದೆ ಸಾಕ್ಷಿ ನಾನೆನ್ನುವ ಜ್ಞಾನ ಕಾಂಡದವರ ನಟ್ಟ ನಡು ಗ್ರಾಮವ ಕೆಡಿಸಿ ಹೋದಿರಿ. ಅಭಿಮಾನವೆಂಬುದು ನಟ್ಟ ನಡು ಗ್ರಾಮ. ಇದು ಭವತಾಪಕ್ಕೆ ಕಾರಣವು. ಮರವಿಂಗೆ ಮೂಲವೆಂದು ತಿಳಿದುದರಿಂದ ನಟ್ಟ ನಡು ಗ್ರಾಮವ ಕೆಡಿಸಿದಿರಿ ಬಸವಯ್ಯ ಎಂದು ಹೇಳಿಹಳು.

***ಹುಟ್ಟಿಲ್ಲದೆ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಯ್ಯ*** : ಓಹೊ ! ಹುಟ್ಟಿಲ್ಲದ ಬಂಜೆ ? ಆಶ್ಚರ್ಯ, ಮಕ್ಕಳಿಲ್ಲದವಳಿಗೆ ಬಂಜೆ ಎಂಬುದು ಲೋಕದಲ್ಲಿ ಕಂಡು ಬರುವ ವಿಷಯ. ಹಡೆಯದವಳಿಗೆ ಬಂಜೆ ಎಂಬುದು ಸಹಜವಾದುದು. ಗರ್ಭಧರಿಸದವಳಿಗೆ ಬಂಜೆ ಎಂಬುದುಂಟು. ಹುಟ್ಟಿಲ್ಲದ ಬಂಜೆ ? ಇವಳು ಹುಟ್ಟೇ ಇಲ್ಲವೆಂದಲ್ಲಿ ಇವಳಿಗೆ ಅವಯವಂಗಳೆಲ್ಲಿ ? ರೂಪವೆ ಇಲ್ಲವೆಂದಲ್ಲಿ ನರಳೆನ್ನಲೆ ? ನರಳಲ್ಲ, ಸುರಳೆನ್ನಲೆ ? ಸುರಳಲ್ಲ, ಶಾರದೆಯಲ್ಲ, ಸರಸ್ವತಿಯಲ್ಲ, ಲಕ್ಷ್ಮಿಯಲ್ಲ, ಪಾರ್ವತಿಯಳಲ್ಲ ಆರಾರು ಆಗಿಲ್ಲವೆಂದಲ್ಲಿ ಹುಟ್ಟಿಲ್ಲದ ಬಂಜೆ ಇವಳಾರು ?

ಇವಳು ದೃಕ್ ರೂಪ ಹೆಣ್ಣು, ನಿರವಯ ಹೆಣ್ಣು , ನಿತ್ಯ ನಿರಂಜನ ಜ್ಞಾನ ಸ್ವರೂಪ ಚಿದಂಗಿ , ಇಂತಪ್ಪ ಚಿದಂಗಿಯೆ ನಿರವಯಳಾಗಿಹ ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ. ಏನಿದು ? ನಿಮ್ಮ ಮಹದ ಆಟ, ಕಾಣದುದು ಕಂಡಂತಾಯಿತಲ್ಲ, ನೋಡದುದು ನೋಡಬರುವಂತಾಯಿತ್ತಲ್ಲ, ನಿರೂಪವೆ ಕರಕಮಲದಲ್ಲಿ ರೂಪವಾಗಿ ಕಂಡಂತಾಯಿತ್ತಲ್ಲ, ನಿಮ್ಮ ಹಿರಿಮೆಯ ಘನವ ಅದೆಂತುಸುರುವುದು. ಅವಯವ ವುಳ್ಳವರಿಗೆ ಮಕ್ಕಳ ಕೊಟ್ಟುದುಂಟು.

ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ! ಏನಿದು ನಿಮ್ಮಯ ಲೀಲೆ, ನಿರವಯವೆಂಬ

ಅರುವಿಂಗೆ ಮಕ್ಕಳ ಕೊಟ್ಟಿರಾ ಅರುವಿಂಗೆ ಅರುವೆಂಬುದು ಮಕ್ಕಳ ಕೊಟ್ಟಿರಾ ? ಅರುವೆನ್ನದ ಅರುವಿಂಗೆ ಅರುವ ದಯತೋರಿದೆಯಾ ! ಇದೆಂಥ ನಿರುಪಮ ಜ್ಞಾನೋದಯದ ಕಾರ್ಯ! ಮಾತಿಲ್ಲದವನಿಗೆ ಮಾತಿನಿಂದಲೆ ಮಾತಿಲ್ಲದವನೆಂದು ಸೂಚಿಸಿದುದು. ಮಾತನಾಡದ ಘನಕ್ಕೆ ಚಿಜ್ಯೋತಿ ಎಂದು ಸೂಚಿಸುವುದು. ಇದೆಂಥ ಕರುಣೆ ನಿನ್ನಯ ಇರವು ಎಂದು ಕೃಪೆಗೈದುದು. ಇದಾರು ವರ್ಣಿಸುವುದು. ಇದು ಹುಟ್ಟಿಲ್ಲದ ಬಂಜೆಗೆ ಕೊಟ್ಟುದು ವರ ಕೃಪೆ. ಇದನ್ನು ನೀಲಮ್ಮ ತಾಯಿ ಕಂಡರಿದು ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಯ್ಯ ಎಂದು ಹೇಳಿಹಳು. ಅರುವಿನ ಜ್ಞಾನ ಮಾಡಿಕೊಟ್ಟವರುಂಟು. ಲಿಂಗ ಜಂಗಮ ಜ್ಞಾನ ಮಾಡಿಕೊಟ್ಟವರುಂಟು. ಅರುವಿಂಗೆ ಅರುವಾದ ನಿಶಬ್ದ ಘನದಿರುವ ತೋರಿಸಿದವರಾರು ? ಲಿಂಗಕ್ಕೆ ಲಿಂಗವಾಗಿಹ, ಸ್ವಯಲಿಂಗದಿರುವತೋರಿಸಿದವರಾರು ? ಬಸವಯ್ಯ ನೀ ತೋರಿದೆಯಾಗಿ ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ಎಂದು ಹೇಳಿಹಳು.

**ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಯ್ಯ :** ಆ ಮಕ್ಕಳ ಫಲವಿಲ್ಲದಂತೆ ಮಾಡಿದ ಮಹಿಮವ ನೋಡಿರೆ ? ಅರುವಿಂಗರುವಾಗಿಹ ಘನಕ್ಕೆ ಮಗುವಿಗೆ ಫಲವಿಲ್ಲದಂತೆ ಮಾಡಿದುದನೇನೆಂಬೆ. ನಿಶಬ್ದ ಲಿಂಗಾನುಭವವಾದುದೆ ಫಲವಿಲ್ಲದಂತೆ ಮಾಡಿದುದು. ಮುಗ್ಧಾನುಭವವಾದುದೆ ಫಲವಿಲ್ಲದಂತೆ ಮಾಡಿದುದು. ಪರಿಣಾಮ ಅನುಭವವಾದುದೆ ಫಲವಿಲ್ಲದಂತೆ ಮಾಡಿದುದಕ್ಕೇನನ್ನಬೇಕು. ಸ್ಥಲವೆನ್ನೆ, ನಿಸ್ಥಲವೆನ್ನೆ, ನಿರ್ಣಯವೆನಗಾದ ಬಳಿಕ ಏನೆಂದರಿಯೆನಯ್ಯ ಕೂಡಲ ಚೆನ್ನಸಂಗಯ್ಯ ಲಿಂಗೈಕ್ಯವೆಂದೆನ್ನೆ ! ದೇಹಿ ಎಂಬ ಬಂಜೆಗೆ ದೇಹಿಗೆ ದೇಹಿಯಾದ ಘನವರಿತುದೆ ಬಂಜೆಗೆ ಮಕ್ಕಳ ಕೊಟ್ಟುದು. ದೇಹಿಗೆ ದೇಹಿಯಾದುದು ನಿಶಬ್ದ ಲಿಂಗಾನುಭಾವವು. ಇದು ಆವಾವ ಫಲವಿಲ್ಲದಂತೆ ಮಾಡಿದುದರಿಂದ ಷಡುಸ್ಥಲವಿಲ್ಲ, ನಿಸ್ಥಲವೆಂಬುದಿಲ್ಲ, ನುಡಿದು ಹೇಳಲು ಬಾರದಂತಹ ನಿರ್ಣಯ ತನ್ನದಾಗಿ ಆವಾವ ಫಲವಿಲ್ಲದಂತೆ ಮಾಡಿದೆ ಎಂದು ಹೇಳಿಹರು.

**ಸಂಗಯ್ಯನಲ್ಲಿ ನೀನೆಂತಪ್ಪ ಮಹಿಮನಯ್ಯ ಬಸವಯ್ಯ :** ಓ! ಬಸವೇಶ ನಟ್ಟ ನಡು ಗ್ರಾಮವ ಕೆಡಿಸಿದಿರಿ ಎಂದಲ್ಲಿ ನೀನೆಂತಪ್ಪ ಮಹಿಮನು. ಇದಲ್ಲದೆ ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರೆಂದಲ್ಲಿ ನೀನೆಂತಪ್ಪ ಮಹಿಮನೆನಬೇಕು ? ಆ ಮಕ್ಕಳಿಗೆ ಫಲವಿಲ್ಲದಂತೆ ಮಾಡಿದೆಂದಲ್ಲಿ ನೀನೆಂತಪ್ಪ ಮಹಿಮನು. ನಿನ್ನ ಮಹಿಮೆಯು ಅವರ್ಣನೀಯವಾಗಿರುವಲ್ಲಿ ನಿರುಪಮ ಮೂರ್ತಿ ಬಸವಯ್ಯ ಎಂದು ಹೇಳಿಹಳು.

# ಆದಿ ಅನಾದಿ ತತ್ವ ಭೇದಿಸಿ ಕೊಟ್ಟ ಗುರು

ಆದಿ, ಅನಾದಿ ತತ್ವವ ಭೇದಿಸಿ ಕೊಟ್ಟ ಗುರುವೆ,
ಅಪ್ರಮಾಣ ಬೆಳಗ ಭೇದಿಸಿಕೊಟ್ಟ ಗುರುವೆ,
'ಅ' ಕಾರ, 'ಉ' ಕಾರ, 'ಮ' ಕಾರ ಕಳೆಯ ನರುಹಿಸಿಕೊಟ್ಟ ಗುರುವೆ,
ಇಷ್ಟ, ಪ್ರಾಣ, ಭಾವವಿದೆಂದು ತೋರಿದ ಗುರುವೆ,
ನಿಜದಿರುವ ನರುಹಿಸಿಕೊಟ್ಟ ಗುರುವೆ,
ನಿರ್ಮಳ ಪ್ರಭೆಯ ತೋರಿದ ಗುರುವೆ,
ನಿಜವನನುಭವಕ್ಕೆ ತಂದ ಗುರುವೆ,

ನಿಮ್ಮ ಘನವ ಕಾಬ ಕಣ್ಣು ಕ್ರಮಗೆಟ್ಟಿತ್ತು
ಸಂಗಯ್ಯ ಬಸವನ ಪ್ರಭೆ ಎಲ್ಲಿ ಅಡಗಿತ್ತೊ?

**ತಾತ್ಪರ್ಯ : *ಆದಿ, ಅನಾದಿ ತತ್ವವ ಭೇದಿಸಿ ಕೊಟ್ಟ ಗುರುವೆ* :**

ಆರು ಗುರು ? ಆದಿ, ಅನಾದಿ ತತ್ವವ ಭೇದಿಸಿ ಕೊಟ್ಟಾತ ಗುರು. ಅಭೇದ್ಯವ ಭೇದಿಸಿ ಕೊಟ್ಟಾತ ಗುರು. ಆದಿ ಲಿಂಗ, ಅನಾದಿ ಶರಣನೆಂದು ಭೇದಿಸಿಕೊಟ್ಟ ಗುರು. ಪರತತ್ವದ ರಹಸ್ಯ ತಿಳಿಸಿಕೊಟ್ಟಾತ ಗುರು. ''ಗುರುವನರಿಯಲು ಅಷ್ಟದಶವಿದ್ಯೆಯನರಿಯಲುಂಟು. ಓದಲುಂಟು, ಕೇಳಲುಂಟು, ಹೇಳಲುಂಟು, ಗುರುಕರುಣೆಯಿಂದ ಗುರುವನರಿದ ಬಳಿಕ ಗುರುವಲ್ಲದೆ ತಾನಿಲ್ಲ, ತಾನಿಲ್ಲಾಗಿ ಓದಲಿಲ್ಲ, ಓದಲಿಲ್ಲಾಗಿ ಕೇಳಲಿಲ್ಲ, ಕೇಳಲಿಲ್ಲಾಗಿ ಹೇಳಲಿಲ್ಲ, ಹೇಳಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯಲಿಲ್ಲದ ಅರುವ ನರುಹಿಸಿದ ಗುರುವ ನರಿಯಲುಂಟೆ ? ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ''.

ಗುರು ಘನ ಆರು ? ಅರಿಯಲಿಲ್ಲದ ಅರುವ ತಿಳುಹಿಸಿದ ಗುರು, ಅರಿಯಬಾರದ ಘನ, ಇಂತಪ್ಪ ಗುರುಲಿಂಗವದುವೆ ಗುರು ಘನವಾಗಿಹುದು. ಇಂತಪ್ಪ ಮಹಾಘನವೆ ಆದಿ ಲಿಂಗ, ಅನಾದಿ ಶರಣನೆಂದು ಹೇಳಿಹರು.

ಲಿಂಗ ! "ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೊಟ್ಟನಲ್ಲದೆ ಅರುವನೆ ಮರೆದು ಕುರುಹನೆ ಪೂಜಿಸುವ ನರಕುರಿಗಳ ನೋಡಾ." ಅರುವ ಅರಿವುದಕ್ಕಾಗಿ ಸದ್ಗುರುನಾಥ ಕುರುಹ ಕೊಟ್ಟುದು ನಿಜ. ಏನನ್ನು ಕೊಟ್ಟ, ಅರುವಿನ ಕುರುಹ ಕೊಟ್ಟರೂ, ಅರುವ ಮರೆದುದರಿಂದ ಇವರುಗಳಿಗೆ ಆದಿ ಲಿಂಗ, ಅನಾದಿ ಶರಣನೆಂಬುದು ತಿಳಿಯದಂತಾಯಿತ್ತು. ಆರು ಗುರು ಕರುಣೆಯಿಂದ ಅರುವ ಅರಿಯ ಹೋಗಿಹರು. ಅವರುಗಳಿಗೆ ಆದಿ ಲಿಂಗವಾಯಿತ್ತು. ಶರಣ ಲಿಂಗದ ಲಿಂಗವಾಗಿ ಸ್ವಯಲಿಂಗಿಯಾದ. ಸ್ವಯಲಿಂಗವಾದುದು ಅದು ''ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ ಜೀವಕ್ಕೆ ಜೀವವಾಗಿ ಇದ್ದುದನಾರು ಬಲ್ಲರು? ಅದು ದೂರವೆಂದು, ಸಮೀಪವೆಂದು ಅದು ಒಳಗೆಂದು ಹೊರಗೆಂದು ಬರುಸೂರೆ ಹೋದರು ಗುಹೇಶ್ವರಾ."

ಪ್ರಭುದೇವರ ರಹಸ್ಯ ತಿಳಿದವರು, ಗುರುವಿಂಗೆ ಗುರುವಾಗಿ ಗುರು ಪ್ರಸಾದ ಕೊಂಡವರು; ತನುವಿಂಗೆ ತನುವಾದುದು ಬಲ್ಲವರು. ಮನಕ್ಕೆ ಮನವಾದುದು ಬಲ್ಲವರು. ಜೀವಕ್ಕೆ ಜೀವವಾದುದು ಬಲ್ಲವರಾದುದರಿಂದ ದೂರವೆನಲಿಲ್ಲ, ಸಮೀಪವೆನಲಿಲ್ಲ, ಒಳಗೆನಲಿಲ್ಲ, ಹೊರಗೆನಲಿಲ್ಲ, ತನುವಿಂಗೆ ತನುವಾದವ ತಾನೆ, ಮನಕ್ಕೆ ಮನವಾದವ ತಾನೆ, ಜೀವಕ್ಕೆ ಜೀವವಾದವ ತಾನೆ, ತಾನೆ ಗುರುಲಿಂಗ, ತಾನೆ ಸ್ವಯಲಿಂಗ, ತಾನೆ ಲಿಂಗ ಒಂದಾಗಿರ್ದ ಜಂಗಮ ರಹಸ್ಯವ ತಿಳಿಸಿದಾತ ಬಸವಯ್ಯ. ಇದು ಮಾತಿಲ್ಲದವನ ಕೂಡ ಮಾತನಾಡ ಹೋಗಿ ತನ್ನ ಸಕಲ ಮಾತುಗಳು ನಿಷ್ಪ್ರಯೋಜಕವಾಗಿ ಮಾತಿನ ಹಂಗು ಹರಿದು ಮಾತಿಲ್ಲದುದು ತನ್ನಿರವು ಸಿದ್ದವಾದುದು ತನ್ನಿಂದ ತನಗೆ ವೇದ್ಯವಾದುದು.

ಶರಣನೆಂದರೆ ಏಕ, ಏವ, ದೇವನೊಬ್ಬನೆ ಶರಣ ಬಸವಯ್ಯ. ಆ ಶರಣ ಬಸವಯ್ಯನ ಇರುವೆ ಪರಮ ಪ್ರಸಾದ ರೂಪವಾಯಿತ್ತು. ಆ ಪರಮ ಪ್ರಸಾದ ರೂಪ ಮೂರ್ತಿ ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವಯ್ಯನು.

ಮಾತಿಲ್ಲದವ ! ಏಕ ಏವ ದೇವನೊಬ್ಬನೆ ಶರಣ ಬಸವಯ್ಯ. ಆ ಶರಣ ಬಸವಯ್ಯ ನಿರುವೆ ಪರಮ ಪ್ರಸಾದ ರೂಪವಾಯಿತ್ತು. ಆ ಪರಮ ಪ್ರಸಾದ ರೂಪವದು ಮಾತಿಲ್ಲದ ವನ ಇರುವಾದುದು. ಇದು ಮಾತಿಲ್ಲದ ಮಥನ ಮಾಡಿದವರಿಗೆ ತಿಳಿಯಬಂದಿತ್ತು. ಇದು ನೀತಿ ಇಲ್ಲದೆ ನಿಜವ ತೋರಿದುದಾಗಿದೆ. ಅದುವೆ ಮನದ ಮನವಾದುದು ತನುವಿನ ತನು ವಾದುದು. ಜೀವದ ಜೀವವಾದುದರಿಂದ ಪರಮ ಪ್ರಸಾದ ರೂಪ ಮೂರ್ತಿ ನಮ್ಮ ಸಂಗ ಯ್ಯನಲ್ಲಿ ಸದ್ಗುರು ಬಸವಯ್ಯನು ಎಂದು ಹೇಳಿಹಳು.

***ಅಪ್ರಮಾಣದ ಬೆಳಗ ಭೇದಿಸಿಕೊಟ್ಟ ಗುರುವೆ*** :

ಆ ಏಕ, ಏವ ದೇವನೊಬ್ಬನೆ ಶರಣ ಬಸವಯ್ಯನ ಇರುವೆ ಅಪ್ರಮಾಣ ಬೆಳಗ. ಅದು ಮಾತಾಡದವನ ಬೆಳಗು, ಮಾತಿಲ್ಲದವನ ಬೆಳಗ ತಿಳಿಸಿದ ಕರುಣೆಯ ಕಳಕಳಿಯೆ ಅಪ್ರಮಾಣ ಬೆಳಗ ಭೇದಿಸಿಕೊಟ್ಟ ಗುರುವಾಗಿದೆ, ಮಹಾಘನವಾಗಿದೆ.

**'ಅ' ಕಾರ 'ಉ' ಕಾರ 'ಮ' ಕಾರ ಕಳೆಯನರುಹಿಸಿಕೊಟ್ಟ ಗುರುವೆ ಇಷ್ಟ ಪ್ರಾಣ ಭಾವವಿದೆಂದು ತೋರಿದ ಗುರುವೆ** :

ಅ ಕಾರವೆಂಬ ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಅಂಗವೆ ಲಿಂಗ, ಉಕಾ ರವೆಂಬ ಪ್ರಾಣದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಅರುವಿನ ವಿಷಯಾದಿ ಭೋಗಂಗಳೆ ಲಿಂಗ, ಮ ಕಾರವೆಂಬ ಮನದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಕರಣಂಗಳೆ ಲಿಂಗ. ಇಂತಪ್ಪ ಸ್ಥೂಲಾಂಗ, ಸೂಕ್ಷ್ಮಾಂಗ, ಕರಣಾಂಗಗಳೆದ ಮೇಲೆ ಲಿಂಗ ಸಾಹಿತ್ಯವ ಮಾಡಿ, ಇಷ್ಟವದು ಇಷ್ಟಲಿಂಗ, ಪ್ರಾಣವದು ಪ್ರಾಣಲಿಂಗ, ಭಾವವದು ಭರಿತ ಲಿಂಗವಿದೆಂದು ತೋರಿದ ಗುರುವೆ ಎಂದು ಹೇಳಿಹಳು.

ನಿಜದಿರುವನರುಹಿಸಿಕೊಟ್ಟ ಗುರುವೆ: ದಿಟದಿರುವ ನರುಹಿಸಿಕೊಟ್ಟ ಗುರುವೆ ದಿಟ ವಿದು ಕಲ್ಪನಾ ರಹಿತವು ಅಂತಪ್ಪ ಕಲ್ಪನಾರಹಿತವದು ಅಭೇದ್ಯದರಿವು ಅದುವೆ ಶ್ರೀಗುರು ಅರಿಯಲಿಲ್ಲದ ಅರುವನರುಹಿಸಿಕೊಟ್ಟುದರಿಂದ ನಿಜದಿರುವನರುಹಿಸಿಕೊಟ್ಟ ಗುರುವೆ ಎಂದು ಹೇಳಿಹಳು.

**ನಿರ್ಮಳ ಪ್ರಭೆಯ ತೋರಿದ ಗುರುವೆ :**

ನಿರ್ಮಳವದು ಮಲವಲ್ಲ ಅಮಲವಲ್ಲ ಮಲವೆಂಬುದು ಅಣವಮಲ, ಮಾಯಾ ಮಲ ಕಾರ್ಮಿಕ ಮಲ, ಮಲತ್ರಯಗಳಿಂದುಕ್ತವಾದ ಮಲಮಯ ಶರೀರ. ಅಮಲವೆಂದರೆ ಶರೀರವೆಂಬ ಪುರದಲ್ಲಿದ್ದ ಪುರುಷನೆ ಅಮಲನು. ಮಲ, ಅಮಲವೆಂಬೆರಡು ಆವುದರಿಂದ ಸಿದ್ಧವಾಗುವವು ಅಂತಪ್ಪ ಸ್ವತಃ ಸಿದ್ಧವಾದ ಬೆಳಗೆ ನಿರ್ಮಳ ಪ್ರಭೆಯಾಗಿದೆ. ಶುದ್ಧ ಸಿದ್ಧವಾದ ಸ್ವಯಂಬೆಳಗ ತನ್ನಿಂದ ತನ್ನ ಕಂಡರಿದುದೆ ನಿರ್ಮಳ ಪ್ರಭೆಯೆಂದು ತೋರಿದ ಗುರುವೆ ಎಂದು ಹೇಳಿಹಳು.

ನಿಜವನನುಭವಕ್ಕೆ ತಂದ ಗುರುವೆ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವಾ ವುದು ಅದು ನಿಜದಿರುವು ಆಗಿದೆ. ಅದುವೆ ಅರಿಯ ಬಾರದ ಘನವಾದುದು ನಿಜವಾಗಿದೆ. ಇಂತಪ್ಪ ಅರಿಯಬಾರದ ಘನವ ಅರಿಯುವಂತೆ ಕರುಣಿಸಿದುದೆ ನಿಜವನನುಭವಕ್ಕೆ ತಂದ ಗುರುವೆ. ಈ ಮಹಾಘನ ಅರಿತವರು ಅರಿಯದಂತಿಪ್ಪರು ಗುಹೇಶ್ವರಾ ಎಂಬ ಪ್ರಭುವಿನ ಪ್ರಸಾದವಾಣಿ ಯತಾರ್ಥವಾಗಿ ತನ್ನಿಂದ ತನಗೆ ವೇದ್ಯವಾದಲ್ಲಿ ಆಗ ಅರಿಯಬಾರದ ಘನ

ತನಗಿಂತನ್ಯವಲ್ಲ. ತಾನೆ ತಾನಾಗಿ ಅರಿವ ಅರುಹಿಸಿಕೊಳ್ಳುವ ಈ ಉಭಯ ಕಾಣದಾಗಿ ತಾನೊಂದೆ ಶುದ್ಧ ಸಿದ್ಧ ಪ್ರಸಿದ್ಧವಾದುದು ವೇದ್ಯವಾದುದೆ ನಿಜವನನುಭವಕ್ಕೆ ತಂದ ಗುರುವೆ ಎಂದು ಹೇಳಿಹಳು.

**ನಿಮ್ಮ ಘನವ ಕಾಬ ಕಣ್ಣು ಕ್ರಮಗೆಟ್ಟಿತ್ತು. ಸಂಗಯ್ಯ ಬಸವನ ಪ್ರಭೆ ಎಲ್ಲಿ ಅಡಗಿತ್ತೊ? :**

ಓಹೊ ! ಸಂಗಯ್ಯ ನಿಮ್ಮ ಅರಿಯಬಾರದ ಘನವ ಕಾಬ ಕಣ್ಣು ಕ್ರಮಗೆಟ್ಟಿತ್ತು. ಅದು ಕಣ್ಣಿನ ಕಣ್ಣಾಯಿತ್ತು. ಅತೀಂದ್ರಿಯವಾಯಿತ್ತು. ಹಿಡಿಯದ ಕೈಯಾಯಿತ್ತು. ಕೇಳದ ಕಿವಿಯಾಯಿತ್ತು. ನೆನೆಯದ ಮನವಾಯಿತ್ತು. ಓಹೊ ! ನಿಮ್ಮ ಅರಿಯಲಿಲ್ಲದ ಅರುವ ಅರಿತು ನಿಮ್ಮ ಘನವ ಕಾಬ ಕಣ್ಣು ಕ್ರಮಗೆಟ್ಟಿತ್ತು. "ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿಯ ತುಂಬಿದ ಬಳಿಕ ಕೇಳಲಿಲ್ಲ. ಕೈಯ ತುಂಬಿದ ಬಳಿಕ ಹಿಡಿಯಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ" ವಾದ್ದರಿಂದ ಬಸವನ ಪ್ರಭೆ ಎಲ್ಲಿ ಅಡಗಿತ್ತೊ ? ಇದನಾನರಿಯೆ ಎಂದು ಹೇಳಿಹಳು.

# ಮಾತಿಲ್ಲದ ಮಥನ

**ಮಾತಿಲ್ಲದೆ ಮಥನವ ಮಾಡಿ ಮೆರೆದೆ ಬಸವಾ,**
**ನೀತಿ ಇಲ್ಲದೆ ನಿಜವ ತೋರಿ ಮೆರೆದೆ ಬಸವಾ,**
**ಅನಿತನಿತು ತೃಪ್ತಿಯ ಮಾಡಿ ತೋರಿದೆಯಯ್ಯಾ**
**ನಿಮ್ಮ ಸಂಗಯ್ಯನಲ್ಲಿ ಸ್ವಲಿಂಗಿಯಾದೆಯಲ್ಲಾ ಬಸವಾ.**

**ತಾತ್ಪರ್ಯ : ಮಾತಿಲ್ಲದ ಮಥನವ ಮಾಡಿ ಮೆರೆದೆ ಬಸವಾ :**

ಬಸವರಸ ಬಸವಪ್ರಭು "ಏಕ ಏವ ದೇವನೊಬ್ಬನೆ ಶರಣಬಸಯ್ಯ. ಆ ಶರಣ ಬಸವಯ್ಯನ ಇರವೆ ಪರಮ ಪ್ರಸಾದ ರೂಪಾಯಿತ್ತು. ಆ ಪರಮ ಪ್ರಸಾದ ರೂಪ ಮೂರ್ತಿ ನಮ್ಮ ಸಂಗಯ್ಯನಲ್ಲಿ ಸದ್ಗುರು ಬಸವಯ್ಯನು." ಏಕ ಏವ ದೇವನೊಬ್ಬನೆ ಶರಣ ಬಸವಯ್ಯ. ಇಂತಪ್ಪ ಒಬ್ಬನೆ ಒಬ್ಬನಾದ ದೇವನು ಇವನೊಬ್ಬನೆ ಶರಣ ಬಸವಯ್ಯ. ಮಾತಿಲ್ಲದ ಗುರು ಲಿಂಗವಾಗಿಹ ಮಹಾಘನನೆ ಏಕ ಏವ ದೇವ ಶರಣಬಸವಯ್ಯ. ಆ ಶರಣ ಬಸವಯ್ಯನಿರವೆ ಪರಮ ಪ್ರಸಾದ ರೂಪಾಯಿತ್ತು. ಇದು ಮಾತಿಲ್ಲದವನ ಕೂಡೆ ಮಾತನಾಡ ಹೋಗಿ ಎನ್ನ ಮಾತಿನ ಪ್ರಸಂಗ ನುಡಿಯಲೊಲ್ಲನೆಂಬುದು ಶರಣ ಬಸವಯ್ಯನ ಇರವು ಕಂಡು ಪರಮ ಪ್ರಸಾದ ರೂಪವಾಯಿತ್ತು ಎಂದು ಹೇಳಿಹಳು.

ಮಾತಿನ ಹಂಗು ಹರಿದು ಆ ಪ್ರಸಂಗದ ಸಂಗವ ಕೆಡಿಸಿ ಪರವಶವಾಗಿ ನಿಂತುದೆ ಮಾತಿಲ್ಲದ ಮಥನವ ಕಂಡುದಾಗಿದೆ. "ಎರಡಿಲ್ಲದ ವಸ್ತುವೆ ನೀ ನೆರಡಾದೆಯಲ್ಲ ಬಸವಯ್ಯ. ಎರಡನೇಕೀಕರಿಸಿ ಭ್ರಮೆಯ ಬಿಡಿಸಿದೆಯಲ್ಲ ಬಸವಯ್ಯ. ಭ್ರಮೆಯಳಿದು ಪರಿಣಾಮದ ಸಂಗ ಮಾಡಿದೆಯಲ್ಲ ಬಸವಯ್ಯ. ತೆರಹಿಲ್ಲದ ವಸ್ತುವಾದೆ ಬಸವಯ್ಯ ಗುರುವೆ. ಸಂಗಯ್ಯನಲ್ಲಿ ಸದು ಹೃದಯನಾದೆಯಲ್ಲ ಬಸವಯ್ಯ."

ಎರಡಿಲ್ಲದ ವಸ್ತುವೆ ಮಾತಿಲ್ಲದ ವಸ್ತು. ಅದುವೆ ಅಜಾತ ಲಿಂಗವು ಅಹುದು. ಗುರುಲಿಂಗವು ಅಹುದು. ಈ ಗುರುಲಿಂಗ ಕಂಡುದು ಅರಿಯಲಿಲ್ಲದ ಅರುವು ತನ್ನಿರುವು ಆದುದರಿಂದ "ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ" ಇವರೀರ್ವರು ಅರಿಯಲಿಲ್ಲದ ಅರುವ ಅರಿತು ಗುರು ಶಿಷ್ಯರೆಂಬ ಪ್ರತಿಭಾವವನ್ನೆ ಮರೆತವರು. ಬೋಧ, ಅಬೋಧವೆಂಬ ಪ್ರತಿಭಾವವನ್ನೆ ಮರೆತುದು ಎರಡಿಲ್ಲದ ವಸ್ತು. ಇದನೇನೆಂಬೆ ? ಇದು ಅಭೇದ್ಯ ಗುರು, ಇಲ್ಲಿ ಅರಿವ ಅರುಹಿಸಿಕೊಂಬುದಿಲ್ಲವಾದ್ದರಿಂದ ಎರಡಿಲ್ಲದ ವಸ್ತು. ಅರಿವ ದೃಕ್ಕಿಲ್ಲ, ಅರುಹಿಸಿಕೊಂಡ ಪ್ರತಿಭಾವವಿಲ್ಲದುದು ಎರಡಿಲ್ಲದ ವಸ್ತು.

ನೀ ನೆರಡಾದೆಯಲ್ಲಾ ಬಸವಯ್ಯ, ನೀ ನೆರಡಾದ ಘನದಿರುವ ಅದನೆಂತು ವರ್ಣಿಸುವುದು. ಗುರುವಾದುದು ಅಹುದು, ಗುರುಲಿಂಗವಾದುದು ಅಹುದು. ಇದು ಮಹವು ಮಹದಾನಂದದ ಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದ ರಹಸ್ಯ. ಇದುವೆ ಮಾತಿಲ್ಲದ ಮಥನವ ಮಾಡಿ ಮರೆದುದು.

ಓ ಬಸವ ಪ್ರಭು, ಏನಿದು ನಿನ್ನ ಸ್ವಲೀಲೆ, ಮಹವು ಮಹದಾನಂದದಲಕ್ಕಾಡಿದ ಮಾತಿಲ್ಲದ ಮಥನವ ಅದನೆಂತುಸುರುವುದು. ಗುರುವಾದುದು ನಿಃಶಬ್ದವೇದವು, ಗುರುಲಿಂಗವು ನಿಃಶಬ್ದ ಬ್ರಹ್ಮವು. ಇವರೆಡು ಒಂದಾದುದು ಬೋಧ ನಷ್ಟ ಮಾಡಿದ ಗುರು ಘನ. ಗುರುಲಿಂಗವದು ಶಬ್ದಮುಗ್ಧವಾಗಿಹ ಘನ. ಗುರು ಘನ ತಾನೆ, ಗುರುಲಿಂಗ ತಾನೆ, ಬೋಧ ನಷ್ಟ ಮಾಡಿದವ ತಾನೆ. ಶಬ್ದಮುಗ್ಧನಾದವ ತಾನೆ, ಎರಡನೇಕೀಕರಿಸಿದುದು ಮಾತಿಲ್ಲದ ಮಥನ. ತನ್ನಿಂದ ತನ್ನನರಿದು ತಾನೆ ತಾನಾಗಿ ತನ್ನಿರುವಿನ ಸುಖದ ಸುಖ ಸವಿಯುವುದೆ ಮಾತಿಲ್ಲದ ಮಥನ. ಇದು ತನ್ನ ಮಥನ. ನಿಜದಿರುವಿನ ಮಥನ. ಶಬ್ದಮುಗ್ಧವಾಗಿ ಸುಖದ ಸುಖವ ಸವಿಯುವ ಮಹವು. ಮಾತಿಲ್ಲದ ಮಥನ. ಇಂತಪ್ಪ ಮಹಾಘನದ ಮಥನವ ಮಾಡಿ ಮರೆದೆ ಬಸವಾ ಎಂದು ಹೇಳಿಹಳು.

**ನೀತಿ ಇಲ್ಲದೆ ನಿಜವ ತೋರಿ ಮರೆದೆ ಬಸವಾ :**

ಓ ಬಸವೇಶಾ, ಅಂಗ ಲಿಂಗ, ಲಿಂಗವಂಗವೆಂದರಿತಲ್ಲಿ ಅಲ್ಲಿಯೇ ಕಾಣಿರೊ ಕೂಡಲ ಸಂಗಯ್ಯ. ನಿರಂತರವಲ್ಲಿಯೆ ಕಾಣಿರೊ ನಿರಂತರವಾಗಿಹ ಮಂಗಲಮಯದಿರುವ ಅರಿತವಂಗೆ ಅಂಗವೆ ಲಿಂಗವಾದುದರಿಂದ ನೀತಿಯಿಲ್ಲದೆ ನಿಜವ ತೋರಿದುದು. ಕರಣಂಗಳೆ ಲಿಂಗವಾದವಂಗೆ ಸಂಕಲ್ಪವೇತರದು ವಿಕಲ್ಪವೇತರದು, ನೀತಿ ಏತರದು ನಿಯಮ ಏತರದು. ನಾಮ ನಿರ್ನಾಮವಾದವಂಗೆ ಸತಿ ಆವುದು ? ಪತಿ ಆವುದು ? ನುಡಿಗೆಡೆಗೊಡದ ಘನವೆ ತನ್ನಿರುವು ಆದವಂಗೆ ಶರಣ ಸತಿ ಎಲ್ಲಿ ? ಲಿಂಗಪತಿ ಎಂಬುದೆಲ್ಲಿ ? ಅಂಗವೆ ಲಿಂಗ, ಲಿಂಗವೆ ಅಂಗವೆಂದರಿತವಂಗೆ, ಕಲ್ಪಿತಕ್ಕೆ ಅವಕಾಶವೆಲ್ಲಿಯದು. ಕಲ್ಪಿತವೆ ನಷ್ಟವಾದವ ಭಾವವರಿಯನು ನಿರ್ಭಾವವರಿಯನು, ತೆರಹಿಲ್ಲದ ಲಿಂಗಭರಿತವೆಂಬ ಗುರುಕಾರುಣ್ಯವ ಅರಿದರಿದು ನೋಡಿದವನು ನಿರುಪಮನಾದುದರಿಂದ ನೀತಿ ಇಲ್ಲದೆ ನಿಜವ ತೋರಿ ಮರೆದೆ ಬಸವಾ ಎಂದು ಹೇಳಿಹಳು.

**ಅನಿತನಿತು ತೃಪ್ತಿ ಮಾಡಿ ತೋರಿದೆಯಯ್ಯ ಬಸವಾ ನಿಮ್ಮ ಸಂಗಯ್ಯನಲ್ಲಿ ಸ್ವಲಿಂಗಿಯಾದೆಯಲ್ಲಾ ಬಸವಾ:**

ಎಲ್ಲಿ ಭಾವವಲ್ಲಿಯೆ ಭರಿತನ ತೋರಿದೆಯಯ್ಯ. ಎಲ್ಲಿ ತನುವೆಂದಲ್ಲಿಯೆ ತನುವಿನ

ತನು ಮಾಡಿ ತೋರಿದೆಯಾ, ಮನದ ಮನ ಮಾಡಿ ತೋರಿದೆಯಯ್ಯ. ಜೀವದ ಜೀವ ಮಾಡಿ ತೆರಹಿಲ್ಲದ ಘನದಿರುವ ತೋರಿ ಅನಿತನಿತು ತೃಪ್ತಿ ಮಾಡಿ ತೋರಿದೆಯಯ್ಯ. ಎಲ್ಲಿ ರೂಪಲ್ಲಿಯೆ ಲಿಂಗಸ್ವಾಯತ ಮಾಡಿ ತೋರಿದೆಯಯ್ಯ. ಜೀವದ ಜೀವ ಮಾಡಿ ತೆರಹಿಲ್ಲದ ಘನದಿರುವ ತೋರಿ ಅನಿತನಿತು ತೃಪ್ತಿ ಮಾಡಿ ತೋರಿದೆಯಯ್ಯ. ಎಲ್ಲಿ ರೂಪಲ್ಲಿಯೆ ಲಿಂಗ ಸ್ವಾಯತ ಮಾಡಿ ತೋರಿದೆಯಯ್ಯ. ಎಲ್ಲಿ ಶಬ್ದವಲ್ಲಿಯೆ ಲಿಂಗ ಸ್ವಾಯತ ಮಾಡಿ ತೋರಿದೆಯಯ್ಯ ಎಲ್ಲಿ ಸೋಂಕಲ್ಲಿಯೆ ಲಿಂಗಸ್ವಾಯತ ಮಾಡಿ ತೋರಿದೆಯಯ್ಯ ಎಲ್ಲೆಲ್ಲೂ ತೆರಹಿಲ್ಲದ ಲಿಂಗ ಭರಿತವಾಗಿಹ ಮಂಗಲಮಯದಿರುವ ಅನಿತನಿತು ತೃಪ್ತಿಯ ಮಾಡಿ ತೋರಿದೆಯಯ್ಯ. ಹೀಗೆ ನಿಮ್ಮಂಗ ಸಂಗಯ್ಯನಲ್ಲಿ ಸ್ವಯಲಿಂಗಿಯಾದೆಯಲ್ಲ ಬಸವಯ್ಯ. ನಿಮ್ಮಂಗವದು ಲಿಂಗ, ಲಿಂಗವದು ನಿಮ್ಮಂಗವಾಗಿ ಸಂಗಯ್ಯನಲ್ಲಿ ಸ್ವಲಿಂಗಿಯಾದೆಯಲ್ಲ ಬಸವಯ್ಯ ಎಂದು ಹೇಳಿಹಳು.

# ಮಾತಿಲ್ಲದೆ ಮಥನ ಮಾಡಿದ ಇರವು

**ಅಧಿಕ ತೇಜೋನ್ಮಯ ಬಸವಾ,**
**ಅನಾದಿ ತತ್ವಮೂರ್ತಿ ನೀನೆ ಅಯ್ಯ ಬಸವಾ,**
**ಎಲೆ ಅಯ್ಯಾ, ಸಮರಸದಲ್ಲಿ ಹುಟ್ಟದ ಪ್ರಣವ**
**ಮೂರ್ತಿಯಯ್ಯ ಬಸವಯ್ಯನು.**
**ಆ ಬಸವನಡಗಿದ ಬಳಿಕ ಆನು ಬದುಕಿದೆನಯ್ಯ ಸಂಗಯ್ಯ.**

**ತಾತ್ಪರ್ಯ : *ಅಧಿಕ ತೇಜೋಮಯ ಬಸವಾ :***

ಬಸವನದು ಅಧಿಕ ತೇಜೋಮಯ ನಾಮ ನಿರ್ನಾಮವಾದ ತೇಜ. ರೂಪು ನಿರೂಪವಾದ ತೇಜ. ಅಂಗ ಲಿಂಗ, ಲಿಂಗ ಅಂಗವೆಂದರಿತ ತೇಜ. ನಿರಂತರ ತೇಜ. ನಿರ್ಲಿಖಿತ ತೇಜ, ನಿರವಧಿ ತೇಜ. ನಿರಾಲಂಬ ತೇಜ. ಈ ತೇಜ ನರರದಲ್ಲ ಸುರರದಲ್ಲ ದೇವಗಣರದಲ್ಲ, ರುದ್ರಗಣರದಲ್ಲ, ಪ್ರಮಥ ಗಣರದಲ್ಲ, ಸತ್ಯರು ನಿತ್ಯರು ಮುಕ್ತರು ಎಂಬ ಮಹಾಮಹಿಮರದಲ್ಲ, ಇದು ತನ್ನಿಂದ ತಾನಾದ ತೇಜ. ಉದಯಾಸ್ತವಿಲ್ಲದ ತೇಜ. ಕಂದದ ತೇಜ, ಕುಂದದ ತೇಜ, ಅಂದು, ಇಂದು, ಎಂದೆಂದೂ ಇದ್ದಂತಿಹ ಘನಕ್ಕೆ ಘನವಾದ ತೇಜ. ಶಬ್ದಮುಗ್ಧ ತೇಜ, ಪರ ಪ್ರಕಾಶವೆಂದರೂ ಇದ್ದಂತಿದ್ದ ಘನ, ಸ್ವಯಂಪ್ರಕಾಶವೆಂದರೂ ಇದ್ದಂತಿದ್ದ ಘನ. ನುಡಿಗೆಡೆಗೊಡದ ಘನವಾದ್ದರಿಂದ ಶಬ್ದಮುಗ್ಧವು ಆಗಿಹ ಸ್ವತೇಜವ ತನ್ನಿಂದ ತನ್ನ ಕಂಡರಿದು ಅದುವೆ ಆಗಿಹ ಘನ ತಾನೆ ಆದುದರಿಂದ ಅಧಿಕ ತೇಜೋಮಯ ಬಸವಾ ಎಂದು ಹೇಳಿಹಳು.

ಅಧಿಕ ತೇಜೋಮಯ ಬಸವಾ, ಬಸವನ ತೇಜ ನೋಡಲಿಲ್ಲದ ಶೃಂಗಾರ ಮಾತಾಡಲಿಲ್ಲದ ಶಬ್ದ. ಹಾಡಲಿಲ್ಲದ ಸ್ವರದಿಂದ ಕಂಡ ನಿರುಪಮ ನಿಲುವು ಅದನೆಂತುಸುರುವುದು ? ಇದು ನೋಡದ ನೋಟವಾಗಿಹ ಘನ ತೇಜ. ಮಾತಾಡದ ಮಾತಿಲ್ಲದವನ ಇರವು. ಮಹಾಕಾಲದಲ್ಲಿ ನಿಮ್ಮಿಂದ ನೀವೆ ಆದ ಸ್ವಯಂಭು ಈ ಸ್ವಯಂಭುವಿನ ತೇಜ ತನ್ನಿಂದ ತನ್ನ ಕಂಡರಿದಲ್ಲಿ ಮಾತಾಡಲಿಲ್ಲದ ಶಬ್ದವೆಂದು ಹೇಳಿಹಳು.

ಇಂತಪ್ಪ ಅಧಿಕ ತೇಜೋಮಯ ಬಸವನ ಹಾಡು, ವೇದವನೋದಿದುದು ಹಾಡಲಿಲ್ಲ. ವೇದಾಂತವನೋದಿದುದು ಹಾಡಲಿಲ್ಲ. ಹದಿನಾರು ಶಾಸ್ತ್ರ ಹದಿನೆಂಟು ಪುರಾಣ, ಇಪ್ಪತ್ತೆಂಟು ದಿವ್ಯಾಗಮಂಗಳು, ಮೂವತ್ತೆರಡು ಉಪನಿಷದಗಳಾವು ಓದಿದುದು ಹಾಡಲಿಲ್ಲ. ಏಕೆಂದರೆ ನಿರ್ಲಿಖಿತ ಜಂಗಮನ ಇರವು. ಅದನ್ನು ಓದುವದದೆಂತು ? ಓದಲು ಬಾರದಿದ್ದಲ್ಲಿ ಅದನ್ನು ಹಾಡಿದ ಸ್ವರದಲ್ಲಿ ಹಾಡುವದದೆಂತು? ಇದು ಕಾರಣ ಕಣ್ಣಿನ ಕಣ್ಣಾದುದರಿಂದ ಅಧಿಕ ತೇಜೋಮಯ ಮಾತಾಡಲಿಲ್ಲದ ಶಬ್ದದಲ್ಲಿ ಬಳಸಲು ಬರುವ ತೇಜವಾದುದರಿಂದ ಅಧಿಕ ತೇಜೋಮಯನೆಂದು ಹೇಳಿಹಳು.

***ಅನಾದಿ ತತ್ವಮೂರ್ತಿ ನೀನೆ ಅಯ್ಯ ಬಸವ*** :

ಅನಾದಿ ತತ್ವಮೂರ್ತಿಯಾಗಿಹ ಬಸವಯ್ಯನ ಘನದಿರುವು ಅದನೆಂತು ವರ್ಣಿಸುವುದು. "ತತ್ವವೆಂಬುದು ನೀನೆತ್ತ ಬಲ್ಲೆಯೊ ? ಸತ್ತು ಮುಂದೆ ನೀನೇನಕಾಂಬೆಯೊ ? ಇಂದೆ, ಇಂದೆಯೊ, ಇಂದೆ ಮಾನವಾ ! ಮಾತಿನಂತುಟಲ್ಲ ಶಿವಾಚಾರದ ಸರಿದೊಡಕು, ಬೀದಿಯ ಮಾತಲ್ಲ, ರಚ್ಚೆಯ ಮಾತಲ್ಲ, ಏಕೋ ರಾತ್ರಿ ಬಿಂದು, ಗುಹೇಶ್ವರ ಲಿಂಗನ ಕೂಡಿದ ಕೂಟ ಇಂದು ಸುಖ, ಮುಂದೆ ಲೇಸು."

ಬಸವ ನಿಮ್ಮಿಂದ ನೀವೆ ಆದ ಸ್ವಯಂಭು ಆಗಿರುವಲ್ಲಿ ಅನಾದಿ ತತ್ವ ಮೂರ್ತಿಯಾದುದು, ನೆಲೆಯಿಲ್ಲದ ಮೂರ್ತಿಯಾಗಿರುವಲ್ಲಿ ಅನಾದಿ ತತ್ವ ಮೂರ್ತಿಯಾದುದು ಪರಿಪೂರ್ಣನೆನ್ನಲು ತೆರಹಿಲ್ಲದ ಘನನಾಗಿಹುದರಿಂದ ಅನಾದಿ ತತ್ವಮೂರ್ತಿಯಾದುದು, ಕಲ್ಪಿತನಾಗಿ ತಿಳಿಯುವದದೆಂತು ? ತತ್ವ, ಅತತ್ವವೆಂದು ವಿಭಾಗಿಸಿ ನೋಡುವ ವಿವೇಕಿಗಾದರೂ ತಿಳಿಯುವದದೆಂತು ? ಮಾತಿಗೆ ನಿಲುಕದ ತತ್ವವದು ಅದನ್ನು ಮಾತಿನಲ್ಲಿ ತಂದಷ್ಟು ತೊಡಕು ಬಿಡಿಸದ ತೊಡಕು ಆಗುವಲ್ಲಿ ಮಾತು ಕಲಿತು ಮಾತನಾಡುವ ಜಾಣರಿಗೆ ನಿಲುಕದ ಇರವು. ಮಾತಿಲ್ಲದೆ ಮಥನ ಮಾಡಿದವರ ಇರವು. ನೀತಿ ಇಲ್ಲದೆ ನಿಜವ ತೋರಿದವರ ಇರವು ಆದುದರಿಂದ ಅನಾದಿ ತತ್ವಮೂರ್ತಿ ನೀನೆ ಅಯ್ಯ ಎಂದು ಹೇಳಿಹಳು.

***ಎಲೆ ಅಯ್ಯ, ಸಮರಸದಲ್ಲಿ ಹುಟ್ಟಿದ ಪ್ರಣವ ಮೂರ್ತಿಯಯ್ಯ ಬಸವಯ್ಯನು*** :

ಬಸವನೆಂಬ ಪ್ರಣವ ಮೂರ್ತಿ ಇದು ಪ್ರಣವದ ಪ್ರಭೆಯ ಮೇಲಣ ಪರಂಜ್ಯೋತಿ, ಅಗಣಿತ, ಅಕ್ಷರೇಶ್ವರ ತಾನೆಂದರಿದ ಜ್ಯೋತಿಯಾದುದರಿಂದ ಸಮರಸದಲ್ಲಿ ಹುಟ್ಟಿದ ಪ್ರಣವ ಮೂರ್ತಿ ಬಸವಯ್ಯ ಎಂದು ಹೇಳಿಹಳು.

***ಆ ಬಸವನಡಗಿದ ಬಳಿಕ ಆನು ಬದುಕಿದನೆಯ್ಯ ಸಂಗಯ್ಯ*** :

ಜೀವ ಪರಮರೇಕತ್ವ ಜ್ಞಾನದಿಂದ ಉದಯವಾದ ಪ್ರಣವಮೂರ್ತಿಯಲ್ಲ, ಲಿಂಗಾಂಗ ಸಮರಸ ಜ್ಞಾನದಿಂದ ಉದಯವಾದ ಪ್ರಣವದ ಮೂರ್ತಿಯಲ್ಲ, ಆ ಬಸವನಡಗಿದ ಬಳಿಕ ಆನು ಬದುಕಿದೆನಯ್ಯ ಬಸವ. ಬಸವ ಶರಣನ ಇರವುಳ್ಳ ಜ್ಞಾನವಾಗಲಿ, ಅರುವಾಗಲಿ, ನನ್ನ ನಿಜದಿರುವಿನಿಂದ ಸಿದ್ಧವಾಗುವವು. ಬಸವೇಶನೆಂಬ ಅರುವು ನನ್ನ ಸಿದ್ಧ ಮಾಡದು. ಇದು ಕಾರಣ ಇವು ಹೆತ್ತರಿವು ಆದುದರಿಂದ ಬಸವನಡಗಿದ ಬಳಿಕ ನನ್ನ ಸ್ವಯವಾಗಿಹ ಸ್ವಮಹಿಮವು ನನ್ನಿಂದ ನನಗೆ ಪ್ರಜ್ವಲಿಸಿದುದರಿಂದ ಆನು ಬದುಕಿದೆನಯ್ಯ ಸಂಗಯ್ಯ ಎಂದು ಹೇಳಿಹಳು.

# ತನುವೆಂಬುದು ಸುಜ್ಞಾನದ ಹೂವು

**ಇಪ್ಪೆಯ ಹೂವ ನನುಗೊಳಿಸಲು ಇಪ್ಪೆ ಹಿಪ್ಪೆಯಾಯಿತ್ತು.**
**ಸರ್ಪನ ಶಿರ ಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯ,**
**ನಾವಲ್ಲಿದ್ದಡೇನು, ನಾವಿಲ್ಲಿದ್ದಡೇನು, ನಮ್ಮ ನಮ್ಮ ಸಂಸರ್ಗದಲ್ಲಿ**
**ನಿರುಪಮಾಕಾರ ಮೂರ್ತಿಗಳಾಗಿ ನಿರವಯವ ನೈದಿ ನಿಜಸುಖಿಗಳಾದೆವು.**
**ಬಸವನಲ್ಲಿ ಎಮಗೆ ತೆರಪಿಲ್ಲವಯ್ಯ ಅಪ್ಪಣ್ಣಾ ಭಾವ ಶೂನ್ಯಳು ನಾನು ಸಂಗಯ್ಯ.**

**ತಾತ್ಪರ್ಯ : ಇಪ್ಪೆಯ ಹೂವನನುಗೊಳಿಸಲು ಇಪ್ಪೆ ಹಿಪ್ಪೆಯಾಯಿತ್ತು :**

ಓಹೋ ! ಇಪ್ಪೆಯ ಹೂವನನುಗೊಳಿಸಿದೆಯಾ, ಮುಳ್ಳು ಕಂಟಿ ? ಇದಾವ ಮುಳ್ಳುಕಂಟಿ, ಅಜ್ಞಾನಿಗೆ ತೊಂದರೆ ಕೊಡುವ ಕಂಟಿಯು, ಸುಜ್ಞಾನಿಗೆ ಅರುವಿನ ಪರಿಮಳವಾಗಿ ತೋರುವುದು. ಬಹು ಜನರಿಗೆ ನಾನಾ ರೀತಿಯಲ್ಲಿ ತೊಂದರೆ ಯುಳ್ಳುದು. ಇದು ಮುಟ್ಟ ಹೋದಡೆ ಗಾಯಗೊಳಿಸುವ ಕಂಟಿ, ಹೊರ ಭಾಗವು ಮುಳ್ಳು ತುಂಬಿದೆ. ಒಳ ಭಾಗವು ಅಪಾಯ ತುಂಬಿದೆ. ಒಳಗೆ ತೋರಿದುದು ಹೊರಗೆ ಇಲ್ಲ, ಹೊರ ದೃಷ್ಟಿಗೆ ಅಪಾಯದ ಕಂಟಿ ನೋಡಲು ಸುಂದರ ಕಾಣಿಸುತ್ತದೆಂದು ಮುಟ್ಟಲು ಹೋದಡೆ ಗಾಯವೇ ಗಾಯ.

ಸುಜ್ಞಾನ ದೃಷ್ಟಿಗೆ ಚಿನ್ಮಯವಾಗಿ ಕಾಣಿಸುತ್ತದೆ. ತೋರಬಾರದ ಘನವಾಗಿ ತೋರುವುದು. ಇದಲ್ಲದೆ ಮರವುಳ್ಳವರಾಗಿ ಮುಟ್ಟಲು ವಿಷ ರೂಪಿ ಸರ್ಪವಾಗಿಹುದು. ಎಲ್ಲಿ ಮುಟ್ಟಿದಡಲ್ಲಿ ವಿಷವೆ ವಿಷಯವು. ಲೋಕದೃಷ್ಟಿಗೆ ಆವುದು ಶಬ್ದ, ಸ್ಪರ್ಶ, ರೂಪ, ರಸ, ಗಂಧವಾಗಿ ಕಾಣಿಸುವುದು ಅದುವೆ ಶಿವಶರಣೆ ನೀಲಮ್ಮ ತಾಯಿ ದಿವ್ಯದೃಷ್ಟಿಗೆ ಅರುವಿಂಗರವು ಆಗಿಹುದು. ಭರಿತ ಭಾವವಾಗಿ, ಜ್ಞಾನ ಘನವಾಗಿ ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆ ಸುಖದ ಸುಖ, ಇಂತಪ್ಪ ಸ್ವಯಾನುಭವದಲ್ಲಿದ್ದು, ಸಂತೋಷವೇ ಸಂತೋಷ ಕಾರ್ಯ ಕಾರಣಂಗಳ ನಷ್ಟವಾಗಿ ವಿಶ್ರಾಂತಿಯೆ, ವಿಶಾಂತ್ರಿಯು ನೆಲಿಸಿ, ಇಂತಪ್ಪ ಅಡೆಯಿಲ್ಲದ ತಡೆಯಿಲ್ಲದ ಆಧಾರ ಹಂಗಿಲ್ಲದ ವಿಶ್ರಾಂತಿ ಧಾಮ ಲಭ್ಯವಾದುದನೇನೆಂಬೆ ಇದು.

**ಸರ್ಪನ ಶಿರ ಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯ :**

ಇಹ ಪರದ ಹಂಗು ಹೋಯಿತ್ತು. ಮರವರುವೆಂಬ ದ್ವಿವಿಧ ದೃಷ್ಟಿ ನಷ್ಟವಾಗಿ ಅರುವಿಂಗರುವಾಯಿತ್ತು. ನೋಡಿರೆ ? ದೇಹ, ದೇಹಿ ಎಂಬೆರಡು ದೃಷ್ಟಿ ನಷ್ಟವಾಗಿ ದೇಹಿಗೆ ದೇಹಿಯಾದ ಮಹವು ಪ್ರಜ್ವಲಿಸಿತ್ತು ನೋಡಿರೆ ? ದೃಶ್ಯ, ದೃಕ್ಕೆಂಬುದು ನುಡಿಯೆ ನಷ್ಟವಾಗಿ ನುಡಿಗೆಡೆಗೊಡದ ಘನವೆ ತನ್ನಿರುವಾದುದು. ಅಲ್ಲಿ ಮರವಿನ ಭಾವದ ತೋರಿಕೆಯು ನಷ್ಟ ಅರುವೆಂಬ ತೋರಿಕೆಯ ಭಾವ ನಷ್ಟವಾಗಿ ಅರಿಯಬಾರದ ಘನವ ಕಾಣಿಸಿತ್ತು. ಇಂತಪ್ಪ ಪರಮ ರಹಸ್ಯ ಕರಗತವಾಗಿ **ನಾವಲ್ಲಿದ್ದಡೇನು, ನಾವಿಲ್ಲಿದ್ದಡೇನು, ನಮ್ಮ ನಮ್ಮ ಸಂಸರ್ಗದಲ್ಲಿ ನಿರುಪಮಾಕಾರ ಮೂರ್ತಿಗಳಾಗಿ ನಿರವಯವನ್ನೈದಿ ನಿಜಸುಖಿಗಳಾದೇವು. ಬಸವನಲ್ಲಿ ಎಮಗೆ ತೆರವಿಲ್ಲವಯ್ಯ ಅಪ್ಪಣ್ಣಾ:** ಅಪ್ಪಣ್ಣಾ ಇವರಾರು ?

ಈತ ಹಡಪದ ಅಪ್ಪಣ್ಣನೆಂಬ ಶರಣ, ಬಸವಯ್ಯನ ಸದುಹೃದಯ ಸಪ್ರೇಮಿ,

ಸಮತೆಯೆ ತನ್ನಿರುವಾಗಿಹ ಸಂತ, ಬಸವರಸರ ಹೃದಯದಿಂದ ಹೊರ ಹೊಮ್ಮಿ ಬಂದ ಅರುಹೃದಯ ಬಸವಣ್ಣ ಸುಖದ ಸುಖವಾಗಿಹ ಶಾಂತಾತ್ಮ ಸುಖದೇಕ ರಸ ಸವಿಯುವ ಸುಖರೂಪು, ಇಂತಪ್ಪ ಮಹಾಂತ ಬಸವರಸರ ಆಜ್ಞೆಯ ಮೇರೆಗೆ ಕಪ್ಪಡಿ ಸಂಗಮದಿಂದ ನೀಲಮ್ಮ ತಾಯಿಯನ್ನು ಲಿಂಗೈಕ್ಯವಾಗಲು ಬರಹೇಳಿದಂತೆ ಕಂಡಂತಾಗುವುದು.

ಬಸವಯ್ಯಗಳಿಗೆ ತಾವು ಲಿಂಗೈಕ್ಯರಾಗಲು ಕಪ್ಪಡ ಸಂಗಮನಾಥನ ಸನ್ನಿಧಿಯೆ ಯೋಗ್ಯವೆಂದು ಅಲ್ಲಿಗೆ ಬರಹೇಳಿದಂತೆ ಕಂಡುಬರುವುದು. ಅಲ್ಲಿಂದ ಬಸವದೇವನ ಆಜ್ಞೆಯ ಮೇರೆಗೆ ನೀಲಮ್ಮ ತಾಯಿಯಲ್ಲಿ ಬಂದಾಗ ಆ ಸಮಯದಲ್ಲಿ ಅರು ಹೃದಯದಿಂದ ಹೊರ ಹೊಮ್ಮಿ ಬಂದ ಅರುವಿನ ಪ್ರಭೆಯೆ. ಈ ವಚನವಾಗಿದೆಯೆಂದು ಕಂಡುಬಂದಂತಾಗುವುದು. ಅದು ಕಾರಣ, ನಾವಲ್ಲಿದ್ದಡೇನು, ನಾವಿಲ್ಲಿದ್ದಡೇನು, ನಮ್ಮ ನಮ್ಮ ಸಂಸರ್ಗದಲ್ಲಿ ನಿರುಪಮಾಕಾರ ಮೂರ್ತಿಯಾಗಿ ನಿರವಯನೈದಿ, ನಿಜಸುಖಿಗಳಾದೆವು. ಬಸವನಲ್ಲಿ ಎಮಗೆ ತೆರವಿಲ್ಲ ಅಪ್ಪಣ್ಣಾ ಎಂದು ನೀಲಮ್ಮ ತಾಯಿ ನುಡಿದುದು ಕಂಡು ಈ ವಚನ ಬಸವರಸರ ಲಿಂಗೈಕ್ಯ ಸಮಯದಲ್ಲಿ ಬಿತ್ತರಿಸಿದ ಪರಿಣಾಮಾನುಭವ ಉತ್ತರ ಪ್ರಸಂಗವಾದಂತೆ ಕಾಣಿಸುವುದು.

**ಭಾವ ಶೂನ್ಯಳು ನಾನು ಸಂಗಯ್ಯ :**

ತೆರಹಿಲ್ಲದ ಲಿಂಗ ಭರಿತವೆಂಬ ನಾಮವಿಡಿದು ಅರಿದರಿದ ಅರು ಹೃದಯದಲ್ಲಿ ಆವಾವ ಭಾವಕ್ಕೆ ತೆರಹಿಲ್ಲ, ಭಾವದಲ್ಲಿಯೆ ಭರಿತವಾಗಿಹ ಲಿಂಗದಿರುವೆ ಪ್ರಜ್ವಲಿಸಿ, ಸರ್ವಾಂಗವೆಂಬ ಭಾವನಷ್ಟವಾಗಿ ಸ್ವಯಲಿಂಗವಾಗಿಹ ತನ್ನಿರುವು ತನ್ನಿಂದ ತನಗೆ ಕಂಡು ಬಂದಿರುವುದರಿಂದ ಭಾವ ಶೂನ್ಯಳು ಎಂದು ಹೇಳಿಹಳು.

ಇದಲ್ಲದೆ ಶರಣಸತಿ ಲಿಂಗಪತಿ, ಬಸವರಸರು ಪತಿ, ನಾನು ಸತಿ, ಬಸವರಸರು ಗುರು, ನಾನು ಶಿಷ್ಯಳೆಂಬ ಭಾವವು ನನ್ನಲ್ಲಿ ಶೂನ್ಯವಾಗಿದೆ ಇಲ್ಲವಾಗಿದೆ. ನೀಲಮ್ಮ ತಾಯಿ, ಅರಿವ ಅರುಹಿಸಿಕೊಂಬ ಈ ಉಭಯ ಭಾವಂಗಳ ನಷ್ಟ ಮಾಡಿ ಅರಿಯಲಿಲ್ಲದ ಅರುವ ಸ್ವೀಕರಿಸಿದ ಮಹಾಶಕ್ತಿಯಾದುದರಿಂದ ಎರಡೆಂಬ ಭಾವವೆ ನಷ್ಟವಾಗಿ ಭರಿತವೆಂಬುದು ನಷ್ಟವಾಗಿ ನಿರ್ಭರಿತದ ನಿಜದಿರುವು ತನ್ನದಾಗಿರುವುದರಿಂದ ಭಾವವೇತರದು ? ಇದು ಕಾರಣ ಭಾವ ಶೂನ್ಯಳು ನಾನು ಸಂಗಯ್ಯ ಎಂದು ಅಪ್ಪಣ್ಣನವರಿಗೆ ತನ್ನ ಪರಿಣಾಮಾನುಭಾವ ಪ್ರಸಂಗ ಬಿತ್ತರಿಸಿಹಳು.

# ಎನಗೆ ಪ್ರಾಣವಿಲ್ಲ , ಹೃದಯದ ಹಂಗಿಲ್ಲ

**ಎನಗಿನ್ನೇನು, ಎಮ್ಮಯ್ಯ ನೈಕ್ಯವ ನೈದಿದ ಬಳಿಕ,**
**ಎನಗೆ ಕಾಯವಿಲ್ಲ, ಎನಗೆ ಪ್ರಾಣವಿಲ್ಲ , ಎನಗೆ ಹೃದಯದ**
**ಹಂಗು ಹರಿದ ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ.**

**ತಾತ್ಪರ್ಯ : ಎನಗಿನ್ನೇನು ಎಮ್ಮಯ್ಯ ನೈಕ್ಯವ ನೈಜದ ಬಳಿಕ ಎನಗೆ ಕಾಯವಿಲ್ಲ :**

ಎಮ್ಮಯ್ಯ ಯಾರು ? ಎಮ್ಮಯ್ಯ ಬಸವಯ್ಯ, ಬಸವಯ್ಯ ಇವರಾರು ? ಬಸವಣ್ಣಾ, "ಓಂಕಾರದಿಂದತ್ತತ್ತ ನೀನೆ ಬಸವಣ್ಣಾ ನಾದ ಬಿಂದು ಕಲೆಗಳಿಂದತ್ತತ್ತ ನೀನೇ ಬಸವಣ್ಣಾ. ಪ್ರಥಮಾಚಾರ್ಯ ನೀನೆ ಬಸವಣ್ಣಾ. ಲಿಂಗಾಚಾರ್ಯ ನೀನೆ, ಜಂಗಮಾಚಾರ್ಯ ನೀನೆ

ಬಸವಣ್ಣಾ, ಪ್ರಸಾದಾಚಾರ್ಯ ನೀನೆ, ಸಕಲಾಚಾರ್ಯ ನೀನೆ, ನೀನೆ ಗತಿಮತಿಯಾಗಿ ಎನ್ನ ನಳುಹಿದ ಕಾರಣ, ಆವ ವರ್ಣವಿಲ್ಲದಂದು ಓಂ ನಮಃ ಶಿವಾಯ ಎನುತಿರ್ದೆನು."

ಎಮ್ಮಯ್ಯನ ಐಕ್ಯವ ನೋಡಿರೆ ? ಓಂಕಾರವೆಂಬ ಪ್ರಣವದುಚ್ಚಾರದ ಶಬ್ದ ಪ್ರಮಾಣದವನಲ್ಲ, ಓಂಕಾರದ ಅರ್ಥವಾಗಿಹ ಜ್ಞಾನಸ್ವರೂಪ, ಸಚ್ಚಿದಾನಂದ ನಿತ್ಯಪೂರ್ಣನೆಂಬ ಶೃತಿ ಪ್ರಮಾಣದವನಲ್ಲ, ಇವುಗಳತ್ತಾಚೆಯಾಗಿಹ ನಿಃಶಬ್ದವೇದಿ ಬಸವಯ್ಯ. ಇತ್ತ ನಾದವಲ್ಲ, ಬಿಂದುವಲ್ಲ, ಕಲೆಯಲ್ಲ ಇವುಗಳಿಗೆ ಬೇರಾಗಿರುವ ಅಸಂಗ ಆತ್ಮ, ಅರು ಸ್ವರೂಪವೆಂಬ ಲಕ್ಷಣಗಳತ್ತಾಚೆ ಇದ್ದ ನಿರವಧಿಯ ಇರವು ಬಸವನ ಇರವು. ಅದುವೆ ನುಡಿಗೆಡೆಗೊಡದ ಘನ ಇಂತಪ್ಪ ಶಬ್ದವೆ ಮೀಸಲವಾಗಿಹ ಇರುವೆ ಅದುವೆ ನುಡಿಗೆಡೆಗೊಡದ ಘನ. ಇಂತಪ್ಪ ಶಬ್ದವೆ ಮೀಸಲಾಗಿಹ ಇರುವೆ ಎಮ್ಮಯ್ಯನೈಕ್ಯವ ಬಲ್ಲವರು. ನಿಃಶಬ್ದವೇದಿಗಳೆ ಲಿಂಗಾಚಾರ್ಯ, ಪ್ರಥಮಾಚಾರ್ಯ, ಜಂಗಮಾಚಾರ್ಯ ಪ್ರಸಾದಾಚಾರ್ಯ, ಸಕಲಾಚಾರ್ಯ ಬಲ್ಲವರು. ಅವರೆ ಗುರುವಿಂಗೆ ಗುರುವಾಗಿಹ ಗುರುಪ್ರಸಾದ ಕೊಂಡು ಗುರುಲಿಂಗ ಉದಯವಾದವರು.

"ಗುರುಲಿಂಗ ಉದಯವಾದ ಉದಯ ನೋಡಿರೆ ? ಹಿಂದೆ ಕತ್ತಲು, ಮುಂದೆ ಬೆಳಗಾಯಿತ್ತು. ಬೆಳಗು ಬೆಳದಿಂಗಳಾಯಿತ್ತು ಕೂಡಲ ಚೆನ್ನಸಂಗಯ್ಯನಲ್ಲಿ ಒಲಿವನ ಉದಯದ ದರ್ಪಣದಿಂದ." ಎಮ್ಮಯ್ಯನೈಕ್ಯವ ನೈದಿದ ರಹಸ್ಯವಿದು, ಗುರುಲಿಂಗ ಉದಯವಾದ ಉದಯವ ನೋಡಿರೆ? ಗುರುವಾದುದು ಕತ್ತಲೆ, ಲಿಂಗವಾದುದು ಕತ್ತಲೆ, ಜಂಗಮವಾದುದು ಕತ್ತಲೆ, ಪ್ರಸಾದ ಪ್ರಸಾದವೆಂಬುದು ಕತ್ತಲೆ, ಗುರು ಲಿಂಗದುದಯ ಮುಂದೆ ಬೆಳಗಾಯಿತ್ತು. ಇದು ಗುರುವಿಂಗೆ ಗುರುವಾಗಿ ಗುರುಪ್ರಸಾದ ಕೊಂಡಾಗ ಗುರುಲಿಂಗ ಮುಂದೆ ಬೆಳಗಾಯಿತ್ತು. ಇದು ಬೆಳಗು ಬೆಳದಿಂಗಳಾದಲ್ಲಿ, ದೇಹಿಗೆ ದೇಹಿಯಾದುದು, ಅರುವಿಂಗರುವಾದುದು, ಇದು ನುಡಿಗೆಡೆಗೊಡದ ಘನವಾಗಿಹ ಘನದಿರುವ ಕಂಡುದು ಬಸವನೈಕ್ಯವ ನೈದಿದ ಬಳಿಕ ಎನಗೆ ಕಾಯವಿಲ್ಲ, ಇಂತಪ್ಪ ರಹಸ್ಯ, ನಿರ್ಲಿಖಿತ ರಹಸ್ಯ, ಬರಹದಲ್ಲಿ ಹೇಗೆ ಬರೆಯುವುದು ಶಬ್ದಮುಗ್ಧವಾಗಿಹ ರಹಸ್ಯ, ಶಬ್ದದಲ್ಲಿ ಕಥನ ಮಾಡುವುದು ಹೇಗೆ ?

ಮಾತಿಲ್ಲದವನ ರಹಸ್ಯ, ಮಾತಿನಿಂದ ಬೆಳೆಸುವುದು ಹೇಗೆ ? ಕುರುಹ ಶಬ್ದ ಕೆಡಿಸುವ ಕಾರ್ಯದಲ್ಲಿ, ಶಬ್ದದ ವೃದ್ಧಿಯಾಗಲಿ, ಬೆಳವಣಿಗೆಯಾದರೂ ಹೇಗೆ ? ಕಲ್ಪಿತಕ್ಕೆ ಅವಕಾಶವಿಲ್ಲದಿರುವಾಗ ಸಂಕಲ್ಪವೇತರದು. ವಿಕಲ್ಪವೇತರದು, ಭಾವಕ್ಕಿಂಬು ಇಲ್ಲದಿರುವಾಗ ಭಾವವೇತರದು, ನಿರ್ಭಾವ ಏತರದು, ಅಹುದಾವುದು, ಅಲ್ಲಾವುದು, ಶಬ್ದವೆ ಮೀಸಲವಾಗಿರುವಲ್ಲಿ ಸಟೆನುಡಿ ಆವುದು ? ದಿಟ ನುಡಿ ಆವುದು ? ನುಡಿಗೆಡೆಗೊಡದ ಘನವಾಗಿಹ ತನ್ನಿರುವ ಕಂಡುದು ಬಸವಯ್ಯ ನೈಕ್ಯವ ನೈದುದು ಆಗ ಎನಗೆ ಕಾಯವಿಲ್ಲ, ಇಂತಪ್ಪ ರಹಸ್ಯ ತನ್ನಿಂದ ತನ್ನ ಅರಿತ ರಹಸ್ಯ. ಇದು ಮೂಕನ ಮೌನ, ಮಾತಿನಲ್ಲಿ ಬಳಸುವದಾದರೂ ಹೇಗೆ ? ಮಾತಿಲ್ಲದವನ ಮಹದಿರುವು ಮಾತನಳಿದಲ್ಲಿ ವೇದ್ಯವು. ಮಾತನಳಿದಲ್ಲಿ ಮನ ನಷ್ಟವಾಗಿರಬೇಕು. ಮನ ನಷ್ಟವಾದಲ್ಲಿ ಭಾವಕ್ಕಿಂಬಿಲ್ಲದಿರಬೇಕು. ಭಾವಕ್ಕಿಂಬುಕೊಡದಿದ್ದಲ್ಲಿ ತಾನು ಅನ್ಯವೆಂಬ ಉಭಯ ದೃಷ್ಟಿ ನಷ್ಟವಾಗಿರಬೇಕು. ಇದು ಕುರುಹು ಶಬ್ದ ಕೆಡಿಸುವ ರಹಸ್ಯವು. ಅವರೆ ನಿಃಶಬ್ದವೇದಿಗಳು, ಸ್ವಯಲಿಂಗಿಗಳು ಅಲ್ಲಿ ಮುಕ್ತಾಯದ ಮುಕ್ತಾಯ.

ಬೋಧರೂಪ ಗುರುವಿಂಗೆ ಕಾರ್ಯವು ಉಂಟು, ಕಾರಣವೂ ಉಂಟು. ಗುರುವಿಂಗೆ

ಗುರುವಾಗಿಹ ಗುರುಲಿಂಗದುದಯಕ್ಕೆ ಕಾರ್ಯವಾವುದು ? ಕಾರಣವಾವುದು ? ಮಹಾಘನಕ್ಕೆ ಮೊದಲಾವುದು ? ಕೊನೆ ಆವುದು ? ಲಿಂಗಕ್ಕೆ ಲಿಂಗವಾಗಿಹ ಸ್ವಯಲಿಂಗ, ಅದು ಪೂಜೆಗೆ ಬಾರದ ಲಿಂಗ, ಒಳ ಹೊರಗೆನ್ನದೆ ಭರಿತವಾಗಿಹ ಲಿಂಗ, ಕಂಡುದೆಲ್ಲವು ಲಿಂಗವಾಗಿರುವಲ್ಲಿ ಸ್ಥಾವರ ಲಿಂಗವಾವುದು ? ಗುರು ಕೊಟ್ಟ ಲಿಂಗವಾವುದು ? ಲಿಂಗವದು ನಿರೂಪ, ನಿರೂಪದ ಅರಿವು ಆದವಂಗೆ ರೂಪವೆನಲಿಲ್ಲ, ಅರೂಪವೆನಲಿಲ್ಲ, ಕಾಯವೆನಲಿಲ್ಲ. ಇದು ಕಾರಣ ಎನಗೆ ಕಾಯವಿಲ್ಲ. ಎನಗೆ ಪ್ರಾಣವಿಲ್ಲ.

**ಎನಗೆ ಪ್ರಾಣವಿಲ್ಲ ಎನಗೆ ಹೃದಯ ಹಂಗು ಹರಿದು ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ:**

ಕಾಯದ ಕಾಯ ತೆರಹಿಲ್ಲದ ಘನವಾಗಿಹ ಕಾಯವ ಕಂಡವಂಗೆ ಅದಾವ ಕಾಯವಿರಬೇಕು. ಲಿಂಗಕಾಯ ಸರ್ವಾಂಗ ಲಿಂಗವಾದವಂಗೆ ಅದಾವ ಕಾಯ? ಪ್ರಾಣದ ಪ್ರಾಣವಾದವಂಗೆ ಅದಾವ ಪ್ರಾಣ, ದಶ ಪ್ರಾಣವಳಿದು ಲಿಂಗವೆ ತಾನೆಂದರಿದ ಶರಣಂಗೆ ಕಲ್ಪಿತವೆಲ್ಲಿ ? ಕಲ್ಪನೆಯೆಲ್ಲಿ ? ಸಾಕಾರ ತಾನೆ, ನಿರಾಕಾರ ತಾನೆ, ತೆರಹಿಲ್ಲದ ಘನಲಿಂಗ ತಾನೆ, ನುಡಿಗೆಡೆಗೊಡದ ಘನ ಮಹಿಮನ ನುಡಿಗೆ ತರಬಾರದು ನೋಡಾ. ಅಪ್ರಮಾಣ, ಪ್ರಮಾಣಕ್ಕೆ ತರಬಾರದು ನೋಡಾ. ಇದು ಕಾರಣ ಕಾಯವಿಲ್ಲ, ಪ್ರಾಣವಿಲ್ಲ, ಹೃದಯದ ಹಂಗುಹರಿದು ಪರಿಣಾಮ, ಪ್ರಸಾದಿಯಾದೆನಯ್ಯ ಸಂಗಯ್ಯ.

ಕಲ್ಪಿತನ ಅರುವುಳ್ಳವರುಂಟು, ಮತಿಯುಳ್ಳವರುಂಟು, ಗತಿವುಳ್ಳವರುಂಟು, ಕಲ್ಪನಾರಹಿತನಾಗಿಹ ಅರುವಿಂಗರುವಾದುದು ಅದು ಪರಮಾನಂದ ಪರಮಾಮೃತ ಪರಮ ಜ್ಞಾನವದು, ವರ್ಣಾತೀತ, ಅದು ಹೃದಯದ ಹಂಗು ಹರಿದ ಪರಿಣಾಮ ಪ್ರಸಾದ ನೋಡಾ ಎಂದು ಹೇಳಿಹಳು.

# ರೂಪವಳಿದ ನಿರೂಪನೆ ಬಸವ

**ನಿರೋಧವಳಿದು ನಿರಾಕಾರವಾಯಿತ್ತು ಬಸವಾ,**
**ನಿರಾಕುಳದ ಭಕ್ತಿ ನಿರ್ವಯಲಾಯಿತ್ತು ಬಸವಾ,**
**ನಿಃಪ್ರಪಂಚಿಕ ನಾದೆ ಬಸವಾ,**
**ನೀನು ಪರಿಣಾಮಿಯಾದೆ ಬಸವಾ,**
**ರೂಪು ನಿರೂಪವಿಡಿದ ಬಸವಾ,**
**ಸಂಗಯ್ಯನ ಮನಃ ಪ್ರೀತಿಯ ಬಸವಾ,**
**ಭರಿತ ನಿರ್ಭರಿತವಾಯಿತು**

**ತಾತ್ಪರ್ಯ : ನಿರೋಧವಳಿದು ನಿರಾಕಾರವಾಯಿತ್ತು ಬಸವಾ :**

ರೂಪವಳಿದು ನಿರೂಪವಾಯಿತ್ತು ಬಸವಾ, ವಿಕಾರದ ಅಡೆ ತಡೆ ನಷ್ಟವಾಗಿ ನಿರ್ವಿಕಾರವಾಯಿತ್ತು ಬಸವಾ, ಸಟೆ ಅಳಿದು ದಿಟವಾಯಿತ್ತು ಬಸವಾ, ನಾಮ ರೂಪವೆಂಬ ಹುಸಿ ತೋರಿಕೆ ನಷ್ಟವಾಗಿ ಸಚ್ಚಿದ್ರೂಪವೆಂಬ ಸತ್ಯ ನಿರಾಕಾರವಾಯಿತ್ತು ಬಸವಾ, ಸತ್ಯವದು ನಿರಂತರವಾಗಿಹ ಸರ್ವಮಂಗಳಮಯವಾದ ಪರಮಸತ್ಯವು. ಆವುದು ನಿರಂತರವಾಗಿಹ ಮಂಗಳ

ಮಯವು ಅದು ಸತ್ಯವು. ಅದುವೆ ನಿರಾಕಾರವು. ನಿರಾಕಾರವದು ನಿರ್ನಾಮವು. ನಿರ್ನಾಮವದು ನಿಜವೆನ್ನದ ಶಬ್ದಮುಗ್ಧವು. ಇದುವೆ ಅರಿಯಲಿಲ್ಲದ ಅರುವಾಗಿಹ ಅನುಪಮಲಿಂಗವು. ಇದು ಓದಿದ ವೇದದಲ್ಲೇನಹುದಯ್ಯ, ಓದಿಸಬಾರದಂಥ ಲಿಂಗಸ್ಥಲ ಇಂತಪ್ಪ ಲಿಂಗಸ್ಥಲ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅಭೇದ್ಯ ಲಿಂಗಸ್ಥಲ, ಗುರುಕರುಣೆಯಿಂದ ಕರಕಮಲಕ್ಕೆ ಬಂದುದು ಏನೆಂಬೇನೆಂಬೆ ಇದು ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟುದು ಅರಿವುಡೆ ನಿರಾಕುಳವಾಯಿತ್ತು.

ನಿರಾಕುಳವದು ಅಜಾತ ಕುಳ, ಅದು ಅಜಾತ ಲಿಂಗ ಇದು ಗುರು ಕರುಣೆಯಿಂದ ದೊರೆತ ಮಹಾಘನ, ಮಹಾಘನವದು "ತೋರಬಾರದ ಘನ, ಹೇಳಲೆಂದೇನೋ ? ಹೇಳಬಾರದ ಘನ ತೋರಲೆಂದೆನೋ ? ಸರಸಂದಾನದ ಪರಿಯಲ್ಲ ಗುಹೇಶ್ವರ ಲಿಂಗವದು ಕಲ್ಪಿತವಲ್ಲ ನೋಡಾ" ಆವುದು ಕಲ್ಪಿತವಲ್ಲ, ಅದು ನಿರಾಕುಳವು, ನಿರಾಕುಳವದು ಪೂಜೆಗೆ ಬಾರದ ಲಿಂಗವಾದ್ದರಿಂದ ಅದು ಕಲ್ಪಿತವಲ್ಲ, ಆವುದು ಕಲ್ಪಿತವಲ್ಲ ಸ್ವಯಲಿಂಗವು ಇಂತಪ್ಪ ಸ್ವತೇಜ ಹೃದಯದಲ್ಲಿ ನೆಲೆಗೊಂಡಿದೆ ಅಲ್ಲಿಯೆ ನಿರಾಕುಳ ಭಕ್ತಿ. ನಿರಾಕುಳದ ಭಕ್ತಿ ನಿರವಯಲಾಯಿತ್ತು ಬಸವಾ.

***ನಿರಾಕುಳ ಭಕ್ತಿ ನಿರ್ವಯಲಾಯಿತ್ತು ಬಸವಾ :***

ನಿರಾಕುಳ ಭಕ್ತಿ, ಇದಾರ ಭಕ್ತಿ, ಶರಣನ ಭಕ್ತಿ. "ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ, ಜಲ ಒಂದೆ ಶೌಚ ಆಚಮನಕ್ಕೆ, ತನ್ನ ತಾನರಿದ ಶರಣಂಗೆ ಕುಲವೊಂದೆ" ಕುಲ ಒಂದಾದ ಭಕ್ತಿಯೆ ನಿರಾಕುಳ ಭಕ್ತಿ. ಶಬ್ದಕ್ಕೆ ತೆರಹಿಲ್ಲದ ಭಕ್ತಿ, ಸಮತೆಯೆ ತನ್ನದಾದ ಶರಣನ ಭಕ್ತಿ, ಸಂಗಯ್ಯನಲ್ಲಿ ನಿರಾಳ ಪ್ರಸನ್ನ ಮೂರ್ತಿಯಾಗಿಹ ಸುಖದ ಸುಖವು ಇದು ಸವೆಯದಾನಂದವು. ಇಂತಪ್ಪ ಅಖಂಡಾನಂದ ನೆಲೆಗೊಂಡ ಪ್ರಶಾಂತ ಸ್ಥಿತಿಯು ನಿರಾಕುಳದ ಭಕ್ತಿ. ಇದು ತನ್ನಲ್ಲಿಯೆ ತಾನೆ ತಾನಾಗಿ ಮಹಾನಂದದಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದ ಭಕ್ತಿ, ಇಂತಪ್ಪ ನಿರಾಕುಳದ ಭಕ್ತಿಯೆ ನಿರ್ವಯಲಾಯಿತ್ತು ಬಸವಾ ಎಂದು ಹೇಳಿಹಳು.

***ನಿಃ ಪ್ರಪಂಚಿಕನಾದೆ ಬಸವಾ :***

ಸರ್ವಪ್ರಪಂಚ ನಿಃ ಪ್ರಪಂಚವಾಯಿತ್ತು. ಪ್ರವೃತ್ತಿ ನಿವೃತ್ತಿಗಳೆಂಬ ದ್ವಂದ್ವಗಳು ಕೆಟ್ಟು ಅದ್ವಿತೀಯವಾಯಿತ್ತು. ಕಾರಣ ನಿಃ ಪ್ರಪಂಚಿಕನಾದುದು ಅದನೆಂತು ವರ್ಣಿಸುವುದು. ಏಕ ಏವ ದೇವನೊಬ್ಬನೆ ಶರಣ ಬಸವಯ್ಯ. ಆ ಶರಣ ಬಸವಯ್ಯನಿರವೆ ಪರಮ ಪ್ರಸಾದ ರೂಪವಾಯಿತ್ತು.

***ನೀನು ಪರಿಣಾಮಿಯಾದೆ ಬಸವಾ :***

ಬಸವಯ್ಯನಿರವೆ ಪರಮ ಪ್ರಸಾದ ರೂಪವಾಗಿರುವಲ್ಲಿ ಪ್ರವೃತ್ತಿ ಎಲ್ಲಿಯದು, ನಿವೃತ್ತಿ ಎಲ್ಲಿಯದು ? ವೃತ್ತಿ ಇದ್ದಲ್ಲಿ ಕಾರ್ಯವುಂಟು. ಕಾರ್ಯವಿದ್ದಲ್ಲಿ ಪ್ರಪಂಚವುಂಟು. ಏಕ ಏವ ದೇವನೊಬ್ಬನೆ ಶರಣ ಬಸವಯ್ಯನಾಗಿಹ ಮಹಿಮಗೆ ತಾನೆ ತಾನಾದ ತನ್ನಿರವು ಪರಿಣಾಮವಾಯಿತ್ತು. ತಾನು ಪರಿಣಾಮಿಯಾದುದರಿಂದ ನಿಃಪ್ರಪಂಚಿಕನಾದೆ ಬಸವಾ.

ನಿಃ ಪ್ರಪಂಚಿಕನಾದ ಬಸವನ ಹಿರಿಮೆ ಅದೆಂತು ವರ್ಣಿಸುವುದು. ಮನಸ್ಥಲಕೆ ಮಂತ್ರವಾದ ತನು ಸ್ಥಲಕ್ಕೆ ಪ್ರಸಾದವಾದ ಕರಸ್ಥಲಕ್ಕೆ ಲಿಂಗವಾದ, ಇಂತಿ ತ್ರಿವಿಧದಲ್ಲಿ ತ್ರಿವಿಧ ಸಾಹಿತ್ಯವಾಗಿ ನಿಃಪ್ರಪಂಚಿಕನಾದೆ ಬಸವ ಎಂದು ಹೇಳಿಹಳು.

**ರೂಪು ನಿರೂಪವಿಡಿದೆ ಬಸವಾ ಸಂಗಯ್ಯನಲ್ಲಿ ಮನಃ ಪ್ರೀತಿಯ ಬಸವಾ, ಭರಿತ ನಿರ್ಭರಿತವಾಯಿತ್ತೆ !** : ನೀನು ನಿಃ ಪ್ರಪಂಚಿಕನಾಗಿ ನಿರಂತರವಾಗಿಹ ಮಂಗಳಮಯದಲ್ಲಿ ಲೀಯವಾಗಿ ನಿರವಧಿಯಾದೆಯಾ ? ಅನಂತನಾದೆಯಾ ? ರೂಪು ನಿರೂಪವಿಡಿದೆ ಬಸವಾ, ಅನಂತನಿಗೆ ಅದಾವ ರೂಪು, ಅದಾವ ಅರೂಪು, ರೂಪ ಅರೂಪಕ್ಕೆ ಸಮವಾಗಿಹ ತನ್ನ ಸ್ವರೂಪ, ತಾನೆಂಬುದು ಕರಿಗೊಂಡಿರುವುದರಿಂದ ನಿರೂಪವಿಡಿದಿಹನು ಬಸವಯ್ಯನು. ರೂಪ ಕಂಡು ನಿರೂಪವಿಡಿದಿಹನು. ಎಷ್ಟೋ ಲಿಂಗವಂತರು, ರೂಪವ ಕಂಡರು ನಿರೂಪ ಕಾಣಲಿಲ್ಲ ವಾದ್ದರಿಂದ ಪೂಜೆಗೆ ಬಾರದ ಲಿಂಗವು ಪೂಜಾಲಿಂಗವಾಯಿತ್ತು. ಬಸವರಸರು, ರೂಪವ ಕಂಡು ನಿರೂಪವಿಡಿದ ತನುವು ಕಂಡು ಅನುವ ಹಿಡಿದ ಆಚಾರವ ಕಂಡು ವಿಚಾರವ ಹಿಡಿದ ಸಂಗಯ್ಯನಲ್ಲಿ ಮನಃ ಪ್ರೀತಿಯ ನೆಲೆಗೊಳಿಸಿದನಲ್ಲದೆ ಭರಿತವೆಂಬುದು ನಿರ್ಭರಿತವಾಯಿತ್ತು ಎಂದು ಹೇಳಿಹಳು.

## ಅರುವೆಂಬ ಲಿಂಗವೇ ಅಂಗ

**ತನುವಾವುದಯ್ಯ ಬಸವಾ,**
**ಮನವಾವುದಯ್ಯ ಬಸವಾ,**
**ನೆನಹಿನ ಪರಿಣಾಮವಾವುದಯ್ಯ ಬಸವಾ,**
**ಉಭಯ ಗುಣ ನಷ್ಟವಾದ ಬಳಿಕ ಪ್ರಸನ್ನ ಸುಖ ಭಾವವುಂಟೆ ?**
**ಸಂಗಯ್ಯನ ಗುರು ಬಸವ**

**ತಾತ್ಪರ್ಯ : ತನುವಾವುದಯ್ಯ ಬಸವಾ ಮನವಾವುದಯ್ಯ ಬಸವಾ :**

ಇದಾರಿಗೆ ಈ ಪ್ರಶ್ನೆ ; "ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಅಂಗವೆ ಲಿಂಗ, ಮನದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಕರಣಂಗಳೆ ಲಿಂಗ, ಪ್ರಾಣದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಅರುವಿನ ವಿಷಯಾದಿ ಭೋಗಂಗಳೆ ಲಿಂಗ, ಅದು ಕಾರಣ, ಸರ್ವಾಂಗ ಸರ್ವಭೋಗ ಲಿಂಗ ಭೋಗ ಕೂಡಲ ಚೆನ್ನಸಂಗಮದೇವಾ."

ಆರ ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ ಅಂಗವೆ ಲಿಂಗವಾದಲ್ಲಿ ತನುವಾವು ದಯ್ಯ ಬಸವಾ, ಅಂಗದ ಮೇಲೆ ಲಿಂಗ ಸಾಹಿತ್ಯವಾದ ಘನದಿರುವ ನೋಡಿರೆ : "ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯ, ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯ ಘ್ರಾಣದೊ ಳಗೆ ಘ್ರಾಣವಿದ್ದುದನೇಕರಿಯರಯ್ಯ, ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯ, ಸ್ಪರ್ಶದೊಳಗೆ ಸ್ಪರ್ಶವಿದ್ದು ಮುಟ್ಟಿಸಲೇಕರಿಯರಯ್ಯ ಕಾಯದೊಳಗೆ ಕಾಯವಿದ್ದು ಬಿಡದು ಬೇರಾಗದು ಏಕರಿಯರಯ್ಯ, ಪ್ರಾಣದೊಳಗೆ ಪ್ರಾಣವಿದ್ದುದ ನೇಕರಿಯರಯ್ಯ ಕೂಡಲಚೆನ್ನ ಸಂಗ ನಿಕ್ಕಿದ ಭೇದವ ಬಿಡಿಸಬಾರದು."

ಅಂಗದ ಮೇಲೆ ಲಿಂಗ ಸಾಹಿತ್ಯವಾದುದು, ಇದು ತನುವಿಂಗೆ ತನುವಾದುದು, ಇದು ಅರುವಿಂಗರುವಾದುದು, ಅದು ತನ್ನಿರವು ಬಿಡದು ಬೇರಾಗದು. ಇದಾವ ತನು ? ಘನಕ್ಕೆ ಘನವಾಗಿಹ ತನು, ಉಪಮಿಸದ ತನು, ಶಬ್ದಮುಗ್ಧ ತನು, ಅರಿದರಿದು ನೋಡಿದಲ್ಲಿ, ತನುವೆನ್ನಲು ತೆರಹಿಲ್ಲ, ತ್ವಕ್ಕು ಎನ್ನಲು ತೆರಹಿಲ್ಲ, ರಕ್ತ, ಮಾಂಸ, ಮೇದಸ್ಸು ಅಸ್ತಿ, ಮಜ್ಜೆ

ಇವಾವು ಅನ್ನಲು ತೆರಹಿಲ್ಲ. ಲಿಂಗವೆನ್ನಲು ತೆರಹಿಲ್ಲ. ಭರಿತವೆನ್ನಲು ತೆರಹಿಲ್ಲ, ಅರುವಿಂಗರುವಾದುದು ಬಿಡದು ಬೇರಾಗದು. ಅರುವಿಂಗರುವಾದುದು ಅದು ಅರಿಯಲಿಲ್ಲದ ಅರುವು ಆದುದು. ಅದರ ಇರುವೆ ಅರಿಯಬಾರದ ಘನವು ಆದುದರಿಂದ ತನುವೆಂಬುದು ಅರಿಯೆ, ಸ್ಥೂಲವಾದುದು ಅರಿಯೆ, ಸೂಕ್ಷ್ಮವಾದದರಿಯೆ, ತ್ವಕ್ಕಾದುದರಿಯೆ, ರಕ್ತವಾದುದರಿಯೆ, ಮಾಂಸವಾದುದರಿಯೆ, ಅಸ್ತಿ ಆದುದನರಿಯೆ, ಮಜ್ಜವಾದುದನರಿಯೆ ಇವಾವು ಆದುದನರಿಯದ್ದರಿಂದ ಅರಿಯಲಿಲ್ಲದ ಅರುವು ತಾನಾದುದು ತನ್ನಿಂದ ತನಗೆ ವೇದ್ಯವಾದುದರಿಂದ ತನುವಾವುದಯ್ಯ ಬಸವಾ ಎಂದು ಹೇಳಿಹಳು.

ಕಣ್ಣಿನೊಳಗೆ ಕಣ್ಣಿದ್ದು, ಕಾಣಲೇಕರಿಯರಯ್ಯ, ಅರುವಿಂಗರುವಾಗಿಹ ಕಣ್ಣೊಳಗೆ ಕಣ್ಣೆಂಬ ಅಂಧತ್ವ, ಮಂದತ್ವ ಪಟುತ್ವವಿದ್ದುದು ಕಾಣಲೇಕರಿಯರಯ್ಯ? ಕಣ್ಣಿನ ಅಂಧತ್ವವಾಗಲಿ ಮಂದತ್ವವಾಗಲಿ ಪಟುತ್ವವಾಗಲಿ ಇದಾವ ಕಣ್ಣಿನಿಂದ ಸಿದ್ಧವಾಗುವುದು. ಕಣ್ಣು ಕಾಣುವುದು ಕಾಣಿಸದಿರುವುದು ಇದಾವ ಕಣ್ಣಿನಿಂದ ನೋಡುವಿರಿ, ಇದನ್ನೇಕರಿಯರಯ್ಯ.? ಇದನ್ನಾರು ಅರಿಯ ಹೋಗಿಹರು ಅವರು ಕಣ್ಣಿನ ಕಣ್ಣಾಗಿಹನು. ಭರಿತ ಕಣ್ಣಾಗಿಹನು. ನೋಡದ ನೋಟವಾಗಿಹನು. ಅರುವಿಂಗರುವಾದುದು ಅದು ಭರಿತವಾಗಿಹ ಅರುವು. ಅಲ್ಲಿ ಅರಿಸಿಕೊಂಬ ಅರಿವ ದೃಕ್‌ರೂಪವು ನಷ್ಟವಾಗಿ ಅಭೇದ್ಯ ಅರುವಿನ ಇರುವಾಗಿಹುದು. ಅದು ಕಾರಣ, ಇಂದ್ರಿಯಂಗಳೆ ಅತೀಂದ್ರಿಯಂಗಳಾದಲ್ಲಿ ತನುವಾವುದಯ್ಯ ಬಸವ ಎಂದು ಹೇಳಿಹರು.

ಇದೇ ಪರಿಯಲ್ಲಿ ಕಿವಿಯೊಳಗೆ ಕಿವಿಯಾಗಿದ್ದುದ ಏಕರಿಯರಯ್ಯ, ಘ್ರಾಣದೊಳಗೆ, ಘ್ರಾಣವಿದ್ದುದವಾಸಿಸಲೇಕರಿಯರಯ್ಯ, ಜಿಹ್ವೆಯೊಳಗೆ ಜಿಹ್ವೆಯಿದ್ದುದ ರುಚಿಸಲೇಕರಿಯರಯ್ಯ, ಸ್ಪರ್ಶದೊಳಗೆ ಸ್ಪರ್ಶವಿದ್ದು ಮುಚ್ಚಿಸಲೇಕರಿಯಿರಯ್ಯ ಅರಿತಲ್ಲಿ ಕಿವಿ ಅದು ಭರಿತ ಕಿವಿ, ಘ್ರಾಣವದು ಭರಿತ ಘ್ರಾಣ, ಜಿಹ್ವೆ ಅದು ಭರಿತ ಜಿಹ್ವೆ. ಸೋಂಕದು ಭರಿತ ಸೋಂಕು ಆಗಿ ಮುಟ್ಟಲಿಲ್ಲ ಭರಿತ ಕಿವಿ, ಅದು ಕೇಳದ ಕಿವಿ, ಜಿಹ್ವೆ ಅದು ಮಾತಾಡದ ಜಿಹ್ವೆ, ಭರಿತ ಘ್ರಾಣವದು, ವಾಸಿಸದ ಘ್ರಾಣ. ಇಂತಪ್ಪ ರಹಸ್ಯವರಿತಲ್ಲಿ ತನುವಾವುದಯ್ಯ ಇಂದ್ರಿಯಂಗಳಾವವಯ್ಯ ಎಂದು ಹೇಳಿಹರು.

ಮನವಾವುದಯ್ಯ ಬಸವಯ್ಯ, ಸಂಕಲ್ಪ ವಿಕಲ್ಪಕ್ಕಿಂಬುಕೊಟ್ಟಲ್ಲಿ ಮನವೆನಿಸುವುದು. ಕಲ್ಪನಾರಹಿತ ತೆರಹಿಲ್ಲದ ಘನವೆಂಬ ನಾಮವಿಡಿದು ಅರಿದರಿದು ಇದ್ದುದು ಸಿದ್ಧವಾಯಿತ್ತು. ಇಲ್ಲದುದು ಕಲ್ಪಿಸಲು ಅವಕಾಶವಿಲ್ಲ, ಆಗ ಅರುವಿಂಗರುವಾದುದು ನಿರಂತರ ಮಂಗಳಮಯ ಸ್ವಯಂಜ್ಯೋತಿ, ವರ್ಣಾತೀತ ತಾನಾಗಿರುವಲ್ಲಿ ಮನವಾವುದಯ್ಯ ಬಸವ ಎಂದು ಹೇಳಿಹರು.

***ನೆನಹಿನ ಪರಿಣಾಮವಾವುದಯ್ಯ ಬಸವಾ :***

ಲಿಂಗಕ್ಕೆ ಲಿಂಗವಾಗಿಹ ಲಿಂಗ ಪ್ರಸಾದಕೊಂಡು ಸ್ವಯಲಿಂಗಿಯಾದವಂಗೆ ಉಪಾದಿ ಮನ ಆವುದು ? ಉಪಾದಿ ರಹಿತ ಮನ ಆವುದು ? ಅರುಹಿಸಿಕೊಂಬ ನಾಮರೂಪ ಉಪಾಧಿಗೆ ಒಪ್ಪಿದ ಮನವೆಲ್ಲಿ ? ಅರಿವೆ ದೃಕ್, ಅಸಂಗ ಆತ್ಮ ನಾನೆಂಬ ಉಪಾಧಿ ರಹಿತ ಮನವೆಲ್ಲಿ ? ಮನವಿದ್ದಲ್ಲಿ ನೆನಹು ಉಂಟು. ನೆನಹಿನ ಪರಿಣಾಮ ಉಂಟು. ಸ್ವಯಲಿಂಗೆಗೆ ಉಪಾಧಿಮನವು ನಷ್ಟ ಉಪಾಧಿ ರಹಿತ ಮನವು ನಷ್ಟವಾದ್ದರಿಂದ ನೆನಹಿನ ಪರಿಣಾಮವಾ

ವುದಯ್ಯ ಬಸವ ಎಂದು ಹೇಳಿಹರು.

***ಉಭಯ ಗುಣ ನಷ್ಟವಾದ ಬಳಿಕ, ಪ್ರಸನ್ನ ಸುಖ ಭಾವವುಂಟೆ ? :***

ಉಭಯ ಗುಣವದು ಅರುಹಿಸಿಕೊಂಬ ಅರಿವ ಈ ಉಭಯ ಗುಣ ನಷ್ಟವಾದ ಬಳಿಕ ಪ್ರಸನ್ನ ಸುಖ ಭಾವವೆಲ್ಲಿ ? ಭಾವವೆ ಭರಿತವಾದಲ್ಲಿ ಭಾವಕ್ಕೆ ತೆರಹಿಲ್ಲ, ಭರಿತನೆಂಬುದಕ್ಕೂ ತೆರಹಿಲ್ಲ, ಲಿಂಗವೆಂಬುದಕ್ಕೂ ತೆರಹಿಲ್ಲವಾದ್ದರಿಂದ ಉಭಯ ಗುಣ ನಷ್ಟವಾದ ಬಳಿಕ ಪ್ರಸನ್ನ ಸುಖ ಭಾವವುಂಟೆ ? ಸುಖದ ಸುಖವಾಗಿಹ ಘನವು ಇಲ್ಲಿ ಪ್ರಸನ್ನವೆಂಬುದಿಲ್ಲ, ಸುಖವೆಂಬುದಿಲ್ಲ, ಭಾವವೆಂಬುದಿಲ್ಲವಾದ್ದರಿಂದ ಪ್ರಸನ್ನ ಸುಖ ಭಾವವುಂಟೆ ಎಂದು ಹೇಳಿಹರು.

***ಸಂಗಯ್ಯನ ಗುರು ಬಸವ :*** ಓ ! ತೆರಹಿಲ್ಲದ ಘನವಾಗಿಹ ಗುರುಲಿಂಗ ಗುರುಬಸವ ನೀನು, ಆವಾವುದಕ್ಕೂ ಅವಕಾಶ ಕೊಡದ ಘನವಾದ್ದರಿಂದ ಸಂಗಯ್ಯನ ಗುರು ಬಸವ ಎಂದು ಹೇಳಿಹಳು.

# ಎಲೆಗಳಿಲ್ಲದ ವೃಕ್ಷ

**ಎಲೆ ಅಯ್ಯಗಳಿರಾ, ಎಲೆಗಳೆದ ವೃಕ್ಷವ ಕಂಡಿರೆ ಬಸವನ,**
**ಎಲೆ ಅಯ್ಯಗಳಿರಾ, ರೂಹಿಲ್ಲದ ಚೋಹವ ಕಂಡಿರೆ ಬಸವನ,**
**ಎಲೆ ಸ್ವಾಮಿಗಳಿರಾ, ನಿಮ್ಮ ನಿಲುವಿನ ದರ್ಪಣವ ಕಂಡಿರೆ ಬಸವನ,**
**ಸಂಗಯ್ಯನಲ್ಲಿ ಸ್ವಯವಳಿದ ಬಸವನ ಕುರುಹ ಕಂಡಿರೆ ?**

**ತಾತ್ಪರ್ಯ :** ***ಎಲೆ ಅಯ್ಯಗಳಿರಾ ! ಎಲೆಗಳೆದ ವೃಕ್ಷವ ಕಂಡಿರೆ ಬಸವನ :***

ಬಸವನ ವೃಕ್ಷ ಎಲೆಗಳನ್ನೆ ನಷ್ಟ ಮಾಡಿದ ವೃಕ್ಷ. ಏತರಲ್ಲಿಯೂ ಹೆಸರಿಲ್ಲದ ಕುರುಹು ಈ ವಸ್ತುವೆಂದು ನಾಮವನ್ನೆ ನಿರ್ನಾಮ ಮಾಡಿದ ವೃಕ್ಷವಾದ್ದರಿಂದ "ಅಂಡಜವಳಿದ ಬಸವ, ಪಿಂಡಜವಳಿದ ಬಸವ, ಆಕಾರವಳಿದ ಬಸವ, ನಿರಾಕಾರವಳಿದ ಬಸವ, ಸಂಗವಳಿದ ಬಸವ, ನಿಸ್ಸಂಗವಳಿದ ಬಸವ, ಸಂಗಯ್ಯನಲ್ಲಿ ಸ್ವಯಲಿಂಗವಾದ ಬಸವಾ," ಓಹೊ ! ಬಸವರಸ ನಿನ್ನ ಎಲೆಗಳಿದ ವೃಕ್ಷವ ಕಂಡವರಾರು ? ನಿನ್ನವರೆ ನಿನ್ನ ಎಲೆಗಳಿದ ವೃಕ್ಷ ಕಾಣುವ ಭಾಗ್ಯವಂತರು, ಅಂಡಜವೆಂಬ ನಾಮ ನಿರ್ನಾಮ ಮಾಡಿದ ಮಹಾಂತ, ಪಿಂಡಜವೆಂಬ ನಾಮವನ್ನೆ ನಿರ್ನಾಮ ಮಾಡಿದ ಮಹಾಂತ. ಆಕಾರ ನಿರಾಕಾರವೆಂಬ ನಾಮವನ್ನೆ ನಿರ್ನಾಮ ಮಾಡಿದ ಮಹಾಂತ, ನಿರ್ನಾಮವಾಗಿಹ ರಹಸ್ಯವು ಇದು ತೆರಹಿಲ್ಲದ ಲಿಂಗಭರಿತವೆಂಬ ಗುರುಕಾರುಣ್ಯವ ಅರಿದರಿದು ನೋಡಿದಲ್ಲಿ ಎಲೆಗಳಿದ ವೃಕ್ಷವ ಕಂಡಿತ್ತು. ತೆರಹಿಲ್ಲದ ಲಿಂಗಭರಿತವೆಂಬುದು ತೋರಿತ್ತು.

***ಎಲೆ ಅಯ್ಯಗಳಿರಾ, ರೂಹಿಲ್ಲದ ಚೋಹವ ಕಂಡಿರೆ ಬಸವನ :***

ರೂಹಿಲ್ಲದ ಚೋಹವದು ತೋರಬಾರದ ಘನ ಕಂಡುದು. ಕಂಡಲ್ಲಿ ಸರ್ವನಾಮ ಸರ್ವ ರೂಪ, ಸರ್ವಾಂಗವದು, ತೆರಹಿಲ್ಲದ ಲಿಂಗಭರಿತವಾದುದು. ನರರು ನರರಲ್ಲ, ಸುರರು ಸುರರಲ್ಲ, ತೆರಹಿಲ್ಲದ ಲಿಂಗಭರಿತವು. ಇತ್ತ ದೇವಗಣ ದೇವಗಣರಲ್ಲ, ರುದ್ರಗಣ ರುದ್ರಗಣರಲ್ಲ, ಪ್ರಮಥ ಗಣ, ಪ್ರಮಥ ಗಣರಲ್ಲ, ತೆರಹಿಲ್ಲದ ಲಿಂಗಭರಿತವು. ಸತ್ಯರು, ಸತ್ಯವರಿತವರಲ್ಲ, ನಿತ್ಯರು ನಿತ್ಯವರಿತವರಲ್ಲ, ಮುಕ್ತರೆಂಬುವವರು, ಮುಕ್ತಿಯನರಿತವರಲ್ಲ,

ಇವರು ಶಬ್ದಸಂಭ್ರಮದವರು. ಇವರೆ ರೂಹಿಲ್ಲದ ವೇಷವಕಂಡವರು. ಮೊಲೆ ಮುಖವದು, ಮೊಲೆ ಮುಖವಲ್ಲ. ಅದು ತೆರಹಿಲ್ಲದ ಲಿಂಗಭರಿತವು. ಗಡ್ಡ ಮೀಸೆ ಅವು ಗಡ್ಡ ಮೀಸೆ ಅಲ್ಲ. ಅದು ತೆರಹಿಲ್ಲದ ಲಿಂಗಭರಿತವು. ಇದು ರೂಹಿಲ್ಲದ ಚೋಹವ ಕಂಡವರು ನೋಡಾ.

ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ, ಅಂಗವೆ ಲಿಂಗವೆಂದು ಬಿತ್ತರಿಸಿರುವಲ್ಲಿ ಪಿಂಡಾಂಡವದು ಅಂಗಾಂಗ, ಅಂಗಾಂಗವದು ಅಂಗಾಂಗವಲ್ಲ. ಅದು ತೆರಹಿಲ್ಲದ ಭರಿತವೆಂಬುದು ರೂಪಿಲ್ಲದ ವೇಷವೆಂದು ತಿಳಿವುದು. ಮನದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಸಂಕಲ್ಪವದು ಸಂಕಲ್ಪವಲ್ಲ. ಅದು ತೆರಹಿಲ್ಲದ ಲಿಂಗಭರಿತವದು. ವಿಕಲ್ಪವದು ವಿಕಲ್ಪವಲ್ಲ. ತೆರಹಿಲ್ಲದ ಲಿಂಗ ಭರಿತವು. ಇದು ರೂಹಿಲ್ಲದ ವೇಷವೆಂದು ಕಾಣುವುದು. ಅದು ಕಾರಣ ನೆನಹು ನೆನಹಲ್ಲ, ಅದು ತೆರಹಿಲ್ಲದ ಲಿಂಗಭರಿತವೆಂದು ತಿಳಿವುದೆ ರೂಹಿಲ್ಲದ ಚೋಹವ ಕಂಡುದು ಬಸವನ ಎಂದು ಹೇಳಿಹಳು.

***ಎಲೆ ಅಯ್ಯಗಳಿರಾ ನಿಮ್ಮ ನಿಲುವಿನ ದರ್ಪಣವ ಕಂಡಿರೆ ಬಸವನ :***

ನಿಮ್ಮ ನಿಲುವು, ನೆಲೆಯಿಲ್ಲದ ನಿಲುವಾಗಿಹ ಜ್ಞಾನ ದರ್ಪಣ, ಇದು ನೆನಹಿಂಗೆ ನಿಲುಕದ ನಿಲುವು. ನಿರ್ಣಯಕ್ಕೆ ನಿಲುಕದ ನಿಲವು. ಭಾವಿಸಿಹೆನೆಂದರೆ ಭಾವಕ್ಕಗಮ್ಯವಾಗಿಹ ನಿಲುವು. ಚಿಂತಿಸುವರೆ, ಚಿಂತನಗೆ ಬಾರದ ಅಚಿಂತ್ಯ ನಿಲುವು. ಇದು ನಾಶ ಅವಿನಾಶವೆಂಬ ಗಣನೆಗತೀತವಾಗಿಹ ನಿಲುವು. ಇದು ಅಗಣಿತ ಅಕ್ಷರೇಶ್ವರ ತಾನೆಂದರಿದ ಶರಣ ಶರಣೆಯರ ನಿಲುವಿನ ದರ್ಪಣವು ಕಂಡಿರೆ ?

ಇದು ಜಗದ್ಭರಿತನ ನಿಲವು, ನೆಲೆಯಿಲ್ಲದ ನಿಲುವು, ಜಗವ ಹೊದ್ದದ ನಿಲುವು, ನಾಮ ನಿರ್ನಾಮವಾಗಿಹ ನಿಲುವು, ರೂಪು ನಿರೂಪವಾಗಿಹ ನಿಲುವು, ಅರಿಯಲಿಲ್ಲದ ಅರುವರಿತವರ ನಿಲುವು, ಸಮತೆ ತನ್ನ ಸ್ವರೂಪಾದವರ ನಿಲುವು, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವಾದವರ ನಿಲುವು. ಗುರುಲಿಂಗ ಉದಯವಾದವರ ನಿಲುವು, ಸ್ವಯಂಜ್ಯೋತಿ ಲಿಂಗ ತನ್ನಿರುವಾದವರ ನಿಲುವು. ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವರಿತವರ ನಿಲುವು ಇದು ತನ್ನಿಂದ ತನ್ನನರಿತವರ ನಿಲುವು. ಜ್ಞಾನ ದರ್ಪಣ ನಿಲುವು.

ಎಲೆ ಅಯ್ಯಗಳಿರಾ, ಎಲೆ ಸ್ವಾಮಿಗಳಿರಾ ! ಅಯ್ಯಗಳು ಇವರಾರು, ಸ್ವಾಮಿಗಳು ಇವರಾರು ? ಗುರು, ಪ್ರಾಜ್ಞರಿಗೆ ಅಯ್ಯ, ಸ್ವಾಮಿ ಎಂದು ಸಂಬೋಧಿಸಿದವರುಂಟು. ಇಲ್ಲಿ ಗುರುಲಿಂಗದುದಯವಾದವರು, ಸ್ವಯಲಿಂಗವೆ ತನ್ನಿರುವಾದವರು. ಇವರು ಮಾತಿಲ್ಲದವನ ಕೂಡೆ ಮಾತನಾಡ ಹೋಗಿ ತಮ್ಮ ಮಾತಿನ ಪ್ರಸಂಗ ನಿಷ್ಪ್ರಯೋಜಕವಾದುದು ತನ್ನಿಂದರಿದು ಮಾತಿನ ಹಂಗು ಹರಿದು ಮಾತಿಲ್ಲದುದೆ ತನ್ನಿರುವಾಗಿ ಅದುವೆ ಗುರುಲಿಂಗವಾಗಿ ನಿರ್ನಾಮ ಜಂಗಮ ಲಿಂಗವಾಗಿ ಪರವಶವಾಗಿ ತನ್ನ ಸ್ವಸುಖದಲ್ಲಿ ಲೀಯವಾದವರು ಅಯ್ಯಗಳು ಸ್ವಾಮಿಗಳು ಎಂದು ಹೇಳಿಹಳು.

***ಸಂಗಯ್ಯನಲ್ಲಿ ಸ್ವಯವಳಿದ ಕುರುಹ ಕಂಡಿರೆ ? :***

ತೆರಹಿಲ್ಲದಭವ ನುಡಿಗೆಡೆಗೊಡದ ಘನವಾಗಿಹ ಸಂಗಯ್ಯನಲ್ಲಿ ಸ್ವಸ್ವರೂಪವೆಂಬುದನ್ನೆ ಅಳಿದ ಬಸವನ ಕಂಡಿರೆ ? ಇಂತಪ್ಪ ರಹಸ್ಯವನರಿತ ಬಸವದೇವಯ್ಯನ ಇರವು, ಶಬ್ದಮುಗ್ಧವಾದ ಇರವು. ಇದು ಕೂಡಲ ಸಂಗಯ್ಯನೆಂಬ ಬೆಳಗಿಂಗೆ ಬೆಳಗಾಗಿ ಶಬ್ದಮುಗ್ಧನಾದವಂಗೆ ಸ್ವಯವಳಿಯುವುದು. ಅದೇತರ ಘನವಾಗಬೇಕು. ಇದು ಕಾರಣ ಬಸವದೇವಯ್ಯ

ನಿರುಪಮನಾದುದರಿಂದ ಸ್ವಯವಳಿದ ಕುರುಹ ಕಂಡಿರೆ ಎಂದು ಹೇಳಿಹಳು.

# ಕರಸ್ಥಲವೆಂಬ ತನುವೇ ಅರಿವಿನ ಚಿಜ್ಯೋತಿ

ಎಲೆ ಅಯ್ಯ ಬಸವಾ,
ಕರಸ್ಥಲ ಬಯಲಾಯಿತ್ತೆನಗೆ,
ಕರಸ್ಥಲ, ಮನಸ್ಥಲವಾಯಿತ್ತು ಬಸವಾ,
ಸಂಗಯ್ಯ ಬಸವ ಹೋದನತ್ತ ನಾನಡಗಿದೆನಯ್ಯ ನಿಮ್ಮಲಿತ್ತ.

**ತಾತ್ಪರ್ಯ : ಎಲೆ ಅಯ್ಯ ಬಸವಾ ಕರಸ್ಥಲ ಬಯಲಾಯಿತ್ತೆನಗೆ** : ಓ ಬಸವೇಶ ಕರಸ್ಥಲ ಬಯಲಾಯಿತ್ತೆನಗೆ, ಆಶ್ಚರ್ಯ, ಮಹದಾಶ್ಚರ್ಯ, ಕರಸ್ಥಲ ಬಯಲಾಯಿತ್ತೆ ! ನೀಲಮ್ಮ ತಾಯಿಯ ಹೃದಯ ಅದಾರಿಗೆ ? ರೂಪು ನಿರೂಪವಾಯಿತ್ತೆ ? ವ್ಯಾಪಕವಾಯಿತ್ತೆ ? ಅಖಂಡವಾಯಿತ್ತೆ ? ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟುದು ಸಾರ್ಥಕವಾಯಿತ್ತು. ಏಕೆಂದರೆ ಅರುವ ಅರಿಯಹೋದವರಿಗೆ ಲಿಂಗವು ಕುರುಹಾಗಿ ಕಾಣಲಿಲ್ಲ, ಪೂಜಾಲಿಂಗವಾಗಲಿಲ್ಲ, ಅದು ಪೂಜಿಸಿಕೊಳ್ಳುವ ದೇವನಾಗದ್ದರಿಂದ ಪೂಜಿಸುವ ತಾ ಭಕ್ತನಾಗಲಿಲ್ಲ, ನೀ ದೇವ ನಾ ಭಕ್ತನೆಂಬ ಸೀಮೆ ನಷ್ಟವಾಯಿತ್ತು.

ಬಹು ಲಿಂಗವಂತರಿಗೆ ಲಿಂಗವು ಕುರುಹಾಗಿ ಕಂಡುದರಿಂದ ಅದು ಪೂಜಿಸಿಕೊಳ್ಳುವ ದೇವನಾಯಿತ್ತು. ಇವರು ಪೂಜಿಸುವ ಭಕ್ತರಾಗಿ ಸಮಯಾಚಾರರ ಗುಂಪೆ ಈ ಭಾವಕ್ಕೆ ಒಪ್ಪಿಕೊಂಡು, ವ್ಯಾಪಕದಿರುವಿನಿಂದ ವಂಚಕರಾಗಿ ನಿಸ್ಸೀಮದಿರುವ ಹೋಗಿ ಸೀಮಿತ ಭಾವ ಸೀಮಿತ ಜ್ಞಾನವಾಗಿ ಇದೊಂದು ಜಾತಿಯಾಗಿ ಅಜಾತ ನಿಲುವು ಕಾಣದಂತಾಗಿದೆ. ಇದು ಕಾರಣ ಪ್ರಭುದೇವ "ನೋಡುವ ಕಂಗಳು ಕತ್ತಲು ಹಿಡಿವ ಕೈಯ ಕತ್ತಲು, ನೆನೆವ ಮನ ಕತ್ತಲು, ಕತ್ತಲೆ ಎಂಬುದು ಇತ್ತಲೆಯಯ್ಯ ಗುಹೇಶ್ವರನೆಂಬುದು ಅತ್ತಲೆಯಯ್ಯ."

ಆರು ಲಿಂಗವ ಕಂಡೆ ಎನ್ನುವರು, ಅವರು ಭ್ರಾಂತರು ಅಜ್ಞಾನಿಗಳು, ಕುರುಡರು. ಲಿಂಗವ ಕೈಯಲ್ಲಿ ಹಿಡಿದಿರುವೆವು ಎನ್ನುವರು ಮರವುಳ್ಳವರು ಅಂಧಕರು. ಆರು ಲಿಂಗವನ್ನು ನೆನೆಯುವ ಮನವುಳ್ಳ ರಾಗಿಹರು ಅವರು ಭ್ರಾಂತರು, ಕುರುಡರು. ಇವರಿಗೆ ಲಿಂಗದ ನಿರೂಪ ಅರಿವು ಆಗದ್ದರಿಂದ ಕಲ್ಪಿತರು. ಇವರಿಗೆ ಲಿಂಗವು ತೋರುವುದಾಗಿ ನೋಡುವ ಕಣ್ಣಾಗಿ ಹಿಡಿವ ಕೈಯಾಗಿ, ನೆನೆವ ಮನವಾಗಿ ಇವರು ಇತ್ತಲೆಯವರು, ಮರವುಳ್ಳವರು, ಅಜ್ಞಾನಿಗಳು. ಗುಹೇಶ್ವರನೆಂಬುದು ಅತ್ತಲಾಯಿತ್ತು, ದೂರವಾಯಿತ್ತು, ತಿಳಿಯದಾಯಿತ್ತು.

ಆರಿಗೆ ಕರಸ್ಥಲ ಪರಂಜ್ಯೋತಿಯಾಗಿದೆ, ಚಿಜ್ಯೋತಿಯಾಗಿದೆ, ಅವರಿಗೆ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗವಾಗಿದೆ. ನಾದ ಬಿಂದು ಕಲೆಗಳಿಗಭೇದ್ಯವಾದ ಅಚಲಿತವಾಗಿದೆ. ಇದಲ್ಲದೆ, ವಾಙ್ಮನಕ್ಕೆ ಬಾರದ ಅಖಂಡಿತ ಲಿಂಗವಾಗಿದೆ. ವ್ಯಾಪಕ ಲಿಂಗವಾಗಿದೆ. "ಚಿದ್ಘನ ಚಿತ್ಪ್ರಕಾಶ ಚಿದಾನಂದ ಲಿಂಗವೆ ಎನ್ನ ಕರಸ್ಥಲಕ್ಕನುವಾದ ಲಿಂಗವೆ ಎನ್ನ ಕಂಗಳ ಕೊನೆಯಲ್ಲಿ ಮೂರ್ತಿಯಪ್ಪೆನಯ್ಯ ಧರ್ಮಿ, ಕೂಡಲ ಚೆನ್ನಸಂಗಮದೇವಾ."

ಶರಣ ಶರಣೆಯರು ಇಷ್ಟಲಿಂಗವ ಕಂಡುದೆತ್ತ ? ಲಿಂಗವಂತರು ಪೂಜಾಲಿಂಗವಾಗಿ ಕಂಡುದೆತ್ತ? ದಿವ್ಯದೃಷ್ಟಿಯೆತ್ತ ! ಚರ್ಮಚಕ್ಷುವೆತ್ತ ? ನಿರೂಪವಾಗಿ ಕಂಡುದೆತ್ತ ?

ರೂಪವಾಗಿ ಕಂಡುದೆತ್ತ ? ಕೈಯ ದೀಪವೆತ್ತ, ವಿಶ್ವಕ್ಕೆ ಬೆಳಗುವ ಸೂರ್ಯನೆತ್ತ, ಚಿದ್ಘನ ಚಿತ್ಪ್ರಕಾಶ ಚಿದಾನಂದ ಲಿಂಗವಾಗಿ ಕಾಣುವ ದಿವ್ಯದೃಷ್ಟಿ ಎತ್ತ ? ಪೂಜಾಲಿಂಗವ ಮಾಡಿ ಪೂಜಿಸುವದೆತ್ತ ? ಇದು ಕಾರಣ ನೀಲಮ್ಮ ತಾಯಿ, ಎಲೆ ಅಯ್ಯ ಕರಸ್ಥಲ ಬಯಲಾಯಿತ್ತೆನಗೆ ಎಂದು ಹೇಳಿಹಳು.

**ಕರಸ್ಥಲ ಮನಸ್ಥಲ ವಾಯಿತ್ತು ಬಸವಾ :**

ಕರಸ್ಥಲ ಮನಸ್ಥಲವಾದುದು ನೋಡಿರೆ, ಕರಸ್ಥಲವೆಂಬುದು "ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ"

ಎಂದು ಬಿತ್ತರಿಸಿದುದು ನೋಡಿದಡೆ ಸುಜ್ಞಾನವೆ ಕರವಾಗಿದೆ, ಸ್ವಾನುಭವವೆ ಸ್ಥಲವಾಗಿದೆ. ಏಕೆಂದರೆ ಕರಸ್ಥಲದಲ್ಲಿ ಪ್ರಜ್ವಲಿಸುವ ಲಿಂಗ ಅದು ವೇದವೇಂದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗವಾಗಿರುವಲ್ಲಿ ಇದನ್ನು ಕಣ್ಣಿನ ಕಣ್ಣಾಗಿ ನೋಡುವುದು. ಕೈಯ ಕೈಯಾಗಿ ಹಿಡಿವುದು. ಏಕೆಂದರೆ ಕೃತ್ಯಕ್ಕೆ ಬಾರದ ಲಿಂಗ, ತೆರಹಿಲ್ಲದ ಲಿಂಗಭರಿತವೆಂಬ ನಾಮವಿಡಿದು ಅರಿದರಿದು ಮನಸ್ಥಲವಾಯಿತ್ತು. ಮನಸ್ಥಲವಾದುದು ನೋಡಿರೆ ! " ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ, ಕೈಯ ತುಂಬಿದ ಬಳಿಕ ಹಿಡಿಯಲಿಲ್ಲ ಮನ ತುಂಬಿದ ಬಳಿಕ ನೆನೆಯಲಿಲ್ಲ ಕೂಡಲ ಸಂಗಮದೇವಾ," ಅವುದು ಸದ್ಗುರು ಕರುಣೆಯಿಂದ ಕರಸ್ಥಲವಾಯಿತ್ತು ಅದುವೆ ಮನಸ್ಥಲವಾಗಿದೆ.

ಮನಸ್ಥಲವದು ಅರಿದರುಹಿಸಿಕೊಂಬುದಕ್ಕೆ ಮೀರಿದ ಘನದಿರುವೆ ಮನಸ್ಥಲವಾಗಿದೆ. ಎನ್ನ ಹೃದಯ ಕಮಲ ಬೆಳಗುವ ಪರಂಜ್ಯೋತಿ ಲಿಂಗ, ಅದುವೆ ಕರಸ್ಥಲಕ್ಕನುವಾದ ಲಿಂಗವು. ಅದುವೆ ಎನ್ನ ಕಂಗಳ ಕೊನೆಯಲ್ಲಿ ಮೂರ್ತಿಗೊಂಡಿಪ್ಪೆಯಯ್ಯ ಧರ್ಮಿ ಕೂಡಲ ಚೆನ್ನಸಂಗಮದೇವಾ.

ಓಹೊ ! ಕೂಡಲ ಸಂಗಯ್ಯನೆಂಬ ಧರ್ಮಿ ಕಂಗಳ ಕೊನೆಯಲ್ಲಿ ಮೂರ್ತಿಗೊಂಡಿಪ್ಪುದರಿಂದ ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ. ಅದು ಎನ್ನ ಕರಸ್ಥಲಕ್ಕನುವಾದ ಸ್ವಯಲಿಂಗ ಭರಿತ ಲಿಂಗವಾದುದರಿಂದ ಕಿವಿ ತುಂಬಿದ ಬಳಿಕ ಕೇಳಲಿಲ್ಲ. ಅದುವೆ ಕರಸ್ಥಲಕ್ಕನುವಾದುದರಿಂದ ಕೈಗಳ ತುಂಬಿ ಹಿಡಿಯಲಿಲ್ಲ. ಚಿದ್ಘನ ಚಿತ್ಪ್ರಕಾಶ ಚಿದಾನಂದ ಲಿಂಗವು ಎನ್ನ ಹೃದಯ ಕಮಲವ ಬೆಳಗುವ ಪರಂಜ್ಯೋತಿ ಲಿಂಗವಾದುದರಿಂದ ಕರಸ್ಥಲ ಮನಸ್ಥಲವಾಗಿ ಮನ ತುಂಬಿದ ಬಳಿಕ ನೆನೆಯಲಿಲ್ಲವೆಂದು ಹೇಳಿಹರು.

***ಸಂಗಯ್ಯ, ಬಸವ ಹೋದನತ್ತ ನಾನಡಗಿದೆನಯ್ಯ ಸಂಗಯ್ಯ :***

ತೆರಹಿಲ್ಲದಭವ ನುಡಿಗೆಡೆಗೊಡದ ಘನನಾಗಿಹ ಸಂಗಯ್ಯ ಹೋದನತ್ತ ನಾನಡಗಿದೆನಯ್ಯ ಸಂಗಯ್ಯ, ನಿಮ್ಮತ್ತಲಿ, ಬಸವಯ್ಯ ತೆರಹಿಲ್ಲದಭವ, ನುಡಿಗೆಡೆಗೊಡದ ಘನನತ್ತ ಹೋದ ನಾನು ನಿಮ್ಮತ್ತಲಿ ಅಡಗಿದೆನಯ್ಯ. ಬಸವ ತೆರಹಿಲ್ಲದಭವನತ್ತ ಹೋದ. ನುಡಿಗೆಡೆಗೊಡದ ಘನನತ್ತ ಹೋದ. ನಾನಡಗಿದೆ ನಿಮ್ಮಲ್ಲಿ, ಬಸವ ನುಡಿಗೆಡೆಗೊಡದ ಘನದತ್ತೆಡೆ ಹೋದ ಕಡೆ ನಾನು ಅಡಗಿದೆ ನಿಮ್ಮತ್ತಲಿ ಎಂದು ಹೇಳಿಹಳು.

# ಗಗನ ಸದೃಶವಾದ ಜ್ಞಾನದ ಮರ

ಎಲೆಗಳೆದ ಮರದಲ್ಲಿ ನೆಳಲ ನರಸಲಿಲ್ಲ,
ಕಳೆಯರತ ದೀಪದಲ್ಲಿ ಬೆಳಗನರಸಲಿಲ್ಲ,
ಕುರುಹಳಿದ ಮೂರ್ತಿಯಲ್ಲಿ ರೂಪನರಸಲಿಲ್ಲ.
ಶಬ್ದವಡಗಿ ನಿಶಬ್ದನಾದ ಬಸವನಲ್ಲಿ ಶಬ್ದವ ನರಸಲಿಲ್ಲ .
ಸಂಗಯ್ಯನಲ್ಲಿ ಕಾಯವಿಲ್ಲದ ಕರುಣೆಯಾದೆ ನಾನು.

**ತಾತ್ಪರ್ಯ : *ಎಲೆಗಳೆದ ಮರದಲ್ಲಿ ನೆಳಲ ನರಸಲಿಲ್ಲ* :**

ಎಲೆಗಳೆದ ಮರ ? ಇದಾವ ಮರ ? ಇದು ಗಗನ ಸದೃಶವಾಗಿಹ ಚಿದ್ರೂಪ ಮರ, ಗಗನಕ್ಕೆ ಎಲೆಯುಂಟೆ ? ಎಲೆಯಿಲ್ಲವೆಂದಲ್ಲಿ ಅದರ ನೆರಳ ಕಂಡವರಾರು ? ಆವುದು ಸಾವಯವ ಅದು ಕಾಣಿಸಿಕೊಳ್ಳುವ ಮರವಾಗಿದೆ. ಅದಕ್ಕೆ ಎಲೆಗಳು ಉಂಟು. ನೆರಳು ಉಂಟು. ಆವುದು ಸಾವಯವ ಎಂಬ ಎಲೆ ನಿರವಯವೆಂಬ ಎಲೆ ಎರಡನ್ನು ನಷ್ಟ ಮಾಡಿದ ಮರದಲ್ಲಿ ಎಲೆಗಳನ್ನೇನು ಹುಡುಕುವುದು, ನೆರಳನ್ನೇನು ಹುಡುಕುವುದು ? ನಾಹಂ ಎಂಬ ಎಲೆ ನಷ್ಟ ಮಾಡಿದ ಮರದಲ್ಲಿ ನಾನೆಂಬ ಅಹಂಕಾರ ರೂಪಿ ಎಲೆಯನೇನು ಹುಡುಕುವುದು.? ಅಲ್ಲಿ ಅದರ ಕರ್ತೃತ್ವ ಭೋಕ್ತೃದ ನೆರಳನೇನು ಹುಡುಕುವುದು? ಸೋಹಂ, ಸೋಹಂ ಎನ್ನದೆ ಶಬ್ದಮುಗ್ಧವಾಗಿಹ ಮರದಲ್ಲಿ ಚಿದಹಂ ಎಲೆಯನೇನ ಹುಡುಕುವುದು.? ಸೋಹಂ, ಸೋಹಂ ಎನ್ನದೆ ಶಬ್ದಮುಗ್ಧವಾಗಿಹ ಮರದಲ್ಲಿ ನಾನೆಂಬ ಅಹಂಕಾರ ರೂಪಿ ಎಲೆ ಯನೇನು ಹುಡುಕುವುದು? ಸೋಹಂ, ಸೋಹಂ ಎನ್ನುವ ನೆಳಲನ್ನಾದರೂ ಏನ ಹುಡುಕು ವುದು. ಮಾತನಾಡದ ಮರ, ಅದು ಮಾತಿಲ್ಲದ ಮರ, ಅಲ್ಲಿ ಅಯಮಾತ್ಮ ಬ್ರಹ್ಮ, ಪ್ರಜ್ಞಾನಂ ಬ್ರಹ್ಮ, ತತ್ವಮಸಿ ಮಹಾ ವಾಕ್ಯರೂಪಿ ಕಲ್ಪಿತರೂಪಿ ನೆಳಲನ್ನೇನ ಹುಡುಕುವುದು ಎಂದು ಹೇಳಿಹರು.

***ಕಳೆಯರಿತ ದೀಪದಲ್ಲಿ ಬೆಳಗ ನರಸಲಿಲ್ಲ:***

ಇದಾವ ದೀಪ ನಾದ ಬಿಂದು ಕಳೆಯಾಗದ ದೀಪ. ಇದು ಬೆಳಗಿಸಿಕೊಳ್ಳುವ ದೀಪ ವಲ್ಲ ಬೆಳಗುವ ದೀಪವಲ್ಲ ಬೆಳಗಿಂಗೆ ಬೆಳಗಾಗಿಹ ದೀಪ, ಕಲ್ಪನಾರಹಿತ ದೀಪ, ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತನ ದೀಪ. ಇಂತಪ್ಪ ಮಹವಾಗಿಹ ದೀಪದಲ್ಲಿ ಬೆಳಗನರ ಸಲಿಲ್ಲ, ಏಕೆಂದರೆ ಕಳೆಯರಿತ ದೀಪ. ಅದು ತೋರಬಾರದ ಘನ ಹೇಳಲೆಂದೇನೊ ? ಹೇಳ ಬಾರದ ಘನ ತೋರಲೆಂದೇನೊ ? ಇದು ಕಳೆಯರಿತ ದೀಪ ಅದು ಅರಿಯಬಾರದ ಘನ ವಾಗಿಹ ದೀಪ. ಅಲ್ಲಿ ಅರುಹಿಸಿಕೊಂಬುದನ್ನೇನು ಹುಡುಕುವುದು ? ಅರಿವುದಿನ್ನೇನು ಹುಡು ಕುವುದು, ಅದು ಮುನ್ನಲಾದ ದೀಪ ತನ್ನಿಂದ ತಾನಾದ ದೀಪ, ಗುರುವನ್ನೇನು ಹುಡು ಕುವುದು, ಅದು ಮುನ್ನಲಾದ ದೀಪ, ತನ್ನಿಂದ ತಾನಾದ ದೀಪ, ಲಿಂಗವನ್ನೇನು ಹುಡುಕು ವುದು, ಜಂಗಮವನ್ನೇನು ಹುಡುಕುವುದು. ಪಾದೋದಕ ಪ್ರಸಾದವನ್ನೇನು ಹುಡುಕುವುದು, ಇವೆಲ್ಲವು ಹೆತ್ತರಿವು, ತಾನೆ ಸ್ವಯಂಜ್ಯೋತಿಯಾಗಿರುವಲ್ಲಿ ಬಿಡಿ ಜ್ಯೋತಿಯನ್ನೇನು ಹುಡುಕು ವುದು.

ಕಳೆಯರಿತ ದೀಪದ ಘನವದನೆಂತುಸುರುವುದು, "ಅರಿದಿಹೆನೆಂದರೆ ಅರುವಿಂಗ ಸಾಧ್ಯ, ನೆನದಿಹೆನೆಂದರೆ ನೆನಹಿಂಗಸಾಧ್ಯ, ಭಾವಿಸಿಹೆನೆಂದರೆ ಭಾವಕ್ಕಸಾಧ್ಯ, ವಾಙ್ಮನಕ್ಕಗೋಚರ ಲಿಂಗವನರಿವ ಪರಿ ಎಂತು. ಗುರು ತೋರದನ್ನಕ್ಕರ ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಲಿಂಗ ಉದಯವಪ್ಪುದೆಂಬ ಶೃತಿ ಹುಸಿಯೆ ? ಕೂಡಲ ಸಂಗಮದೇವಾ ನಿಮ್ಮ ಮಹಾನುಭಾವರ ಮಥನದಲ್ಲಿ ನಿಜವನೆಲೆಗೊಳಿಸಾ ಪ್ರಭುವೆ." ಇದು ಗುರು ಶಿಷ್ಯರ ಮಧ್ಯದಲ್ಲಿದ್ದ ದೀಪ. ಗುರುವಿಂಗೆ ಗುರುವಾಗಿಹ ಗುರುಲಿಂಗ ದೀಪ. ಇದು ಅರಿಯಲಿಲ್ಲದ ಅರುವಾಗಿಹ ದೀಪ. ಉದಯಾಸ್ತವಿಲ್ಲದ ದೀಪ. ಸಂಯೋಗ ವಿಯೋಗವಿಲ್ಲದ ದೀಪ, ಆದಿ ಮಧ್ಯ ಅಂತ್ಯವ ಕಾಣದ ದೀಪ. ನಿರಾಲಂಬ ದೀಪ, ನಿರವಧಿ ದೀಪ, ಸಂಗ ನಿಸ್ಸಂಗವಳಿದ ದೀಪ. ಸಂಗಯ್ಯನಲ್ಲಿ ಸ್ವಯಲಿಂಗವಾಗಿಹ ದೀಪ. ಕಳೆಯರಿತ ದೀಪವಾದ್ದರಿಂದ ಬೆಳಗನರಸಲಿಲ್ಲ ಎಂದು ಹೇಳಿಹರು.

"ಎಲ್ಲ ಎಲ್ಲವ ನರಿತವರುಂಟು ತನ್ನ ತಾನರಿತವರುಂಟೆ ? ಅರಿದಿಹೆನೆಂಬುದು ಚಿದಹಮ್ಮದ ಮದ ನೋಡಾ. ನಿರ್ಧರಿಸಿದೆನೆಂಬುದು ಅನುಭವದ ಮದ ನೋಡಾ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವನರಿವ ಪರಿ ಎಂತು ? ಇದು ಕಾರಣ ನಿರಂಜನ ಪ್ರಭು ನಾಗೇಶ್ವರಾ." ನಿನ್ನ ವರ ಪ್ರಸಾದದನುವಿನಗಮ್ಯ ಅಗಾಧವ ಉಪಮಿಸಬಹುದೆ ? ಕಳೆಯರಿತ ದೀಪ, ಇದು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವಾಗಿಹ ದೀಪ, ಅರಿವ ಅರುಹಿಸಿಕೊಂಬ ಈ ಉಭಯ ಕಾಣದ ದೀಪ, ಅಭೇದ್ಯ ದೀಪ. ಅದು ಅರಿದಿಹೆನೆನ್ನದ ದೀಪ. ನಿರ್ಧರಿಸಿಹೆನೆನ್ನದ ದೀಪ. ಅರಿಯಲಿಲ್ಲದ ಅರುವಾಗಿಹ ದೀಪ. ತನ್ನಿರವು ಮರೆಯದ ದೀಪ. ಈ ದೀಪವನರಿದ ಬಳಿಕ ಬೆಳಗ ಹುಡುಕಲಿಲ್ಲ, ನಿರಾಲಂಬ ಬೆಳಗು, ಅಲ್ಲಿ ಬೆಳಗಿಸಿಕೊಂಬುದಿಲ್ಲ, ಬೆಳಗುವುದಿಲ್ಲ ಬೆಳಗಿಂಗೆ ಬೆಳಗಾಗಿಹ ಮಹಾ ಘನವಾಗಿಹ ದೀಪದಲ್ಲಿ ಬೆಳಕನ್ನೇನ ಹುಡುಕುವುದು. ನಿರವಧಿಯಾಗಿಹ ನಿರಂತರ ಬೆಳಕೇ ಬೆಳಕು. ಅಲ್ಲಿ ಆದಿ, ಮಧ್ಯ, ಅಂತ್ಯವೆಂಬ ಗಣನೆಯಿಂದುಕ್ತವಾದ ಬೆಳಕನ್ನೇನ ಹುಡುಕುವುದು.

***ಶಬ್ದವಡಗಿ ನಿಶಬ್ದನಾದ ಬಸವನಲ್ಲಿ ಶಬ್ದವ ನರಸಲಿಲ್ಲ*** :

ಮಾತೆ ಅಡಗಿ ಮಾತಿಲ್ಲದವನಾದ ಬಸವನಲ್ಲಿ ಮಾತ ಹುಡುಕಲಿಲ್ಲ, ಮಾತನಳಿದು ಮಾತಿಲ್ಲದವನಾದಲ್ಲಿ ಮಾತ ಹುಡುಕಲಿಲ್ಲ, ''ಊಹಿಸಲರಿಯೆ ಉತ್ತರವನರಿಯೆ, ದೇವನ ನರಿಯೆ, ದೇಹಿಕನರಿಯೆ, ನಾನೆನ್ನಲರಿಯೆ, ನೀನೆನ್ನಲರಿಯೆ ಕೂಡಲ ಚೆನ್ನಸಂಗಮದೇವನೆನ್ನಲರಿಯೆ." ಶಬ್ದವಡಗಿ ನಿಶಬ್ದನಾದ ಬಸವನ ಊಹಿಸಲರಿಯೆ ಉತ್ತರವನರಿಯೆ, ಕಲ್ಪಿತಕ್ಕೊಳಪಟ್ಟವನಾದಲ್ಲಿ ಊಹಿಸಬಹುದು. ಉತ್ತರವು ಅರಿಯಬಹುದು. ಕಲ್ಪನಾರಹಿತನಲ್ಲಿ ಊಹಿಸುವುದೆಂತು, ಉತ್ತರವನರಿಯುವದೆಂತು ? ನುಡಿಗೊಳಪಟ್ಟವನಲ್ಲ, ದೇವನೆನಬಹುದು, ನಾನೆನಬಹುದು, ನೀನೆನಬಹುದು, ಕೂಡಲಚೆನ್ನಸಂಗನೆನಬಹುದು. ನುಡಿಗೆಡೆಗೊಡದ ಘನವೆ ತನ್ನಿರುವು ಆದ ಮಹಾಂತಂಗೆ ಊಹಿಸಲರಿಯೆ, ಉತ್ತರವನರಿಯೆ, ದೇವನರಿಯೆ, ದೇಹಿಕನರಿಯೆ,ನಾನೆನ್ನಲರಿಯೆ, ನೀನೆನ್ನಲರಿಯೆ, ಕೂಡಲ ಚೆನ್ನಸಂಗಮ ದೇವ ನೆನ್ನಲರಿಯೆ ಎಂದು ಹೇಳಿಹರು.

***ಸಂಗಯ್ಯನಲ್ಲಿ ಕಾಯವಿಲ್ಲದ ಕರುಣೆಯಾದ ನಾನು*** : ಸಂಗಯ್ಯನೆಂಬ ತೆರಹಿಲ್ಲದ ಘನದಲ್ಲಿ ಕಾಯವೆಂಬುದಕ್ಕವಕಾಶವಿಲ್ಲದುದ ಕಂಡು ಕಾಯವಿಲ್ಲದ ಕರುಣೆಯಾದೆ ನಾನು

ಎಂದು ಹೇಳಿಹಳು.

# ದೇಹ ಇಲ್ಲದಿದ್ದರೆ ಪ್ರಾಣಕ್ಕೆ ಆಶ್ರಯ ಉಂಟೆ?

**1. ಎಲೆ ಶರಣರಿರಾ ಎಲೆ ಭಕ್ತರಿರಾ**
**2. ಭಕ್ತಿ ಕಾಂಡದ ಮೂಲಿಗನ ಕಾಣಿರೆ ! ಬಸವನ,**
**3. ಆ ಭಕ್ತಿಯ ಸಂಗದ ಶಿವೈಕ್ಯನ ಕಾಣಿರೆ ! ಬಸವನ,**
**4. ಭಕ್ತಿಯ ನಿಜ ಸಮಾಧಿಯ ಸುಖವ**
**5. ಕರುಣಿಸುವ ಅಯ್ಯ ಬಸವನ**
**6. ಸಂಗಯ್ಯನ ಪ್ರಸಾದಿಯಾದ ಬಸವನ ಕಾಣಿರೆ ಭಕ್ತರು.**

***ತಾತ್ಪರ್ಯ : ಎಲೆ ಶರಣರಿರಾ ಎಲೆ ಭಕ್ತರಿರಾ ಭಕ್ತಿ ಕಾಂಡದ ಮೂಲಿಗನ ಕಾಣಿರೆ ಬಸವನ :*** "ಸಾಕಾರ ನಿರಾಕಾರವೆಂಬ ಎರಡು ಸ್ವರೂಪಂಗಳು, ಒಂದು ಆಹ್ವಾನ, ಒಂದು ವಿಸರ್ಜನ, ಒಂದು ವ್ಯಾಕುಲ, ಒಂದು ನಿರಾಕುಳ, ಉಭಯ ಕುಳರಹಿತ ಗುಹೇಶ್ವರ ನಮ್ಮ ಶರಣ ನಿಶ್ಚಿಂತ"। ಸಾಕಾರ ನಿರಾಕಾರವೆಂಬ ಎರಡು ಸ್ವರೂಪದ ಭಕ್ತಿ ಕಾಂಡದವರು ಇಹರು. ಕೆಲವರು ಸಾಕಾರ ಭಕ್ತಿ ಕಾಂಡದವರು, ಕೆಲವರು ನಿರಾಕಾರ ಭಕ್ತಿ ಕಾಂಡದವರು. ಸಾಕಾರಕ್ಕೆ ಒಪ್ಪಿದ ಭಕ್ತಿಕಾಂಡಿಗಳು ಸಾಕಾರ ದೇವನನ್ನು ಆಹ್ವಾನಿಸುತ್ತಾರೆ, ನಿರಾಕಾರ ದೇವನನ್ನು ವಿಸರ್ಜಿಸುತ್ತಾರೆ. ನಿರಾಕಾರ ದೇವನನ್ನು ಒಪ್ಪಿದ ಭಕ್ತರು ನಿರಾಕಾರ ದೇವನನ್ನು ಆಹ್ವಾನಿಸುತ್ತಾರೆ. ಸಾಕಾರ ದೇವನನ್ನು ತ್ಯಜಿಸುತ್ತಾರೆ. ಇವರುಗಳಿಗೆ ಒಂದು ವ್ಯಾಕುಲವಾಗಿದೆ. ಇನ್ನೊಂದು ನಿರಾಕುಳವಾಗಿದೆ. ಸಾಕಾರವನ್ನು ಒಪ್ಪಿದ ಭಕ್ತರಿಗೆ ನಿರಾಕಾರ ಭಕ್ತಿಯು ಕಠಿಣವಾಗಿದೆ. ಸಾಕಾರವು ಹಗುರವಾಗಿದೆ. ನಿರಾಕಾರವನ್ನು ಒಪ್ಪಿದ ಭಕ್ತರು ಸಾಕಾರವು ಒಪ್ಪದವರಾಗಿಹರು. ನಿರಾಕಾರವು ನಿರಾಕುಳವಾಗಿದೆ, ನಿರಂತರವಾಗಿದೆ.

ಶರಣನು ಮಾತ್ರ ಉಭಯ ಕುಳ ರಹಿತನಾಗಿಹನು ನಿಶ್ಚಿಂತನಾಗಿಹನು. ಸಾಕಾರ ದೇವನ ಭಕ್ತಿಕಾಂಡಿಗಳೆ ಇರಲಿ, ನಿರಾಕಾರದ ಭಕ್ತರೆ ಇರಲಿ, ಅವರನ್ನು ಉಭಯ ಕುಳರಹಿತರನ್ನಾಗಿ ಕಂಡ, ಮೂಲಿಗರನ್ನಾಗಿ ಕಂಡು ಮೂಲಿಗನಾದ. ಸಾಕಾರ ನಿರಾಕಾರ ಈ ಉಭಯ ಭಕ್ತರು, ಶರಣನ ಇರವು ಕಾಣಲಿಲ್ಲ, ಶರಣ ನಿಶ್ಚಿಂತ: ಆತನು ಉಭಯ ಕುಳರಹಿತ ನಿಸ್ಸೀಮ. ಶರಣನ ನಿಸ್ಸೀಮತ್ವ ಇವರಿಗೆ ಇಲ್ಲವಾದ್ದರಿಂದ ಸೀಮಿತರಾಗಿಹರು. ಇವರಿಗೆ ಭೇದ ಭಾವ, ಭೇದ ಜ್ಞಾನ, ಭೇದ ದೃಷ್ಟಿಯೆ ಸತ್ಯವಾಗಿ ಭಕ್ತಿ ಕಾಂಡದ ಮೂಲಿಗನ ಕಾಣದಾದರು.

"ಅಂತರಂಗದಲ್ಲಿ ಅರಿವಾದಡೇನಯ್ಯ ಬಹಿರಂಗದಲ್ಲಿ ಕ್ರಿಯೆ ಇಲ್ಲದನ್ನಕ್ಕ ದೇಹ ಇಲ್ಲದಿದ್ದರೆ ಪ್ರಾಣಕ್ಕಾಶ್ರಯವುಂಟೆ ? ಕನ್ನಡಿ ಇಲ್ಲದಿದ್ದಡೆ ತನ್ನ ಮುಖವ ಕಾಣಬಹುದೆ ? ಸಾಕಾರ ನಿರಾಕಾರ ಏಕೋ ದೇವ ಕೂಡಲ ಚೆನ್ನಸಂಗಯ್ಯ." ಅಂತರಂಗದಲ್ಲಿ ಅರುವಿನ ಅರುವಾದಡೇನು ಬಹಿರಂಗದಲ್ಲಿ ನಿರೂಪ ಕ್ರಿಯೆ ಇಲ್ಲದನ್ನಕ್ಕ ದೇವ ಇಲ್ಲದಿದ್ದರೆ ಪ್ರಾಣಕ್ಕಾಶ್ರಯವುಂಟೆ, ಕನ್ನಡಿ ಇಲ್ಲದಿದ್ದಡೆ ತನ್ನ ಮುಖ ಕಾಣುವುದೆ ? ತನು, ಮನ, ಧನವೆಂಬಿವು ಕನ್ನಡಿ ನೋಡಯ್ಯ. ಕನ್ನಡಿಯಾದಲ್ಲಿ ಸಾಕಾರ ನಿರಾಕಾರ ಏಕೋ ದೇವ, ಸಾಕಾರವು ಏಕೋ ದೇವ, ನಿರಾಕಾರವು ಏಕೋ ದೇವ. ಈ ಸಮಸ್ವರೂಪಿ ದೇವನ ಕಾಣಲು ಅಂಗದ ಮೇಲೆ

ಲಿಂಗ ಸಾಹಿತ್ಯ ಮಾಡಿ ಅಂಗವೆ ಲಿಂಗವೆಂದು ತೋರಿದ ಭಕ್ತಿ ಕಾಂಡದ ಮೂಲಿಗ, ನಿರಾಕಾರ ವೆಂಬ ಪ್ರಾಣದ ಮೇಲೆ ಮನದ ಮೇಲೆ ಲಿಂಗ ಸಾಹಿತ್ಯ ಮಾಡಿ ಪ್ರಾಣಲಿಂಗವ ತೋರಿದ, ಮನವೆ ಲಿಂಗ ಮಾಡಿ ತೋರಿದ ಕಾರಣ, ಭಕ್ತಿ ಕಾಂಡದ ಮೂಲಿಗನ ಕಾಣಿರೆ ! ಎಂದು ಹೇಳಿಹಳು.

***ಭಕ್ತಿಯ ಸಂಗದ ಶಿವೈಕ್ಯನ ಕಾಣಿರೆ ಬಸವನ :***

ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಅಂಗಕ್ಕೆ ಲಿಂಗಸಂಗವೆ ಭಕ್ತಿಯ ಸಂಗ ವಾಗಿದೆ. ಸಂಗವ ಶಿವೈಕ್ಯನ ಕಾಣಿರೆ ಬಸವನ. ಲಿಂಗವೆಂದರೆ ಶಿವ. ಶಿವನೆಂದರೆ ಲಿಂಗ. ಲಿಂಗ ವೆಂದರೆ ಸಂಗ, ಸಂಗವೆಂದರೆ ಲಿಂಗ, ಲಿಂಗವು ಅಭೇದ್ಯವು ಶಿವನು ಅಭೇದ್ಯನು ಸಂಗನು ಅಭೇದ್ಯನು. ಈ ಮೂರು ನುಡಿಗೆಡೆಗೊಡದ ಘನವು. ಇಂತಪ್ಪ ರಹಸ್ಯವ ಅರಿದರಿದು ನೋಡಿ ತನ್ನಿರುವು ಘನಕ್ಕೆ ಘನವಾದುದೆಂದು ಅರಿತುದರಿಂದ "ಘನ ಗಂಭೀರ, ಮಹಾಘನ ದೊಳಗೆ ಘನಕ್ಕೆ ಘನವಾಗಿರ್ದನಯ್ಯ ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ" ಎಂದು ಬಸವರಸರು ಬಿತ್ತರಿಸಿದುದು ಇಲ್ಲಿ ಕಾಣಬಹುದಾಗಿ ದೆ.

***ಭಕ್ತಿಯ ಸಂಗದ ಶಿವೈಕ್ಯನ ಕಾಣಿರೆ ? :***

ಬಸವ ಭಕ್ತಿಯ ಸಂಗದ ಶಿವೈಕ್ಯ. ಬಸವಪ್ರಭು ಬಸವಯ್ಯನ ಭಕ್ತಿಯೆಲ್ಲರಂತಹುದಲ್ಲ. "ಬಸವರಸರ ಭಕ್ತಿಗೆ ಉತ್ಪತ್ತಿ ಇಲ್ಲ, ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ. ಸ್ಥಿತಿ ಇಲ್ಲಾಗಿ ಲಯವಿಲ್ಲ, ಲಯವಿಲ್ಲಾಗಿ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿರ್ಪನಯ್ಯ ಗುಹೇಶ್ವರ ನಿಮ್ಮ ಶರಣ ಬಸವಣ್ಣನು."

ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ಸಂಕೇತವೆ ಘನ ಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದ ಸಂಕೇತ. ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದ ಮುಗ್ಧನಾದುದು. ಅದು ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ಸಂಕೇತ, ಇದುವೆ ಭಕ್ತಿಯ ಸಂಗ, ತೆರಹಿಲ್ಲದ ಲಿಂಗ ಭರಿತನ ಭಕ್ತಿಯಸಂಗ, ಇದನರಿದರಿದು ನೋಡಿ ಲಿಂಗಭರಿತ ಶಿವ ಭರಿತವೆಂಬುದು ನಿರ್ನಾಮವಾದುದರಿಂದ ಶಿವೈಕ್ಯನ ಕಾಣಿರೆ ಬಸವನ ಎಂದು ಹೇಳಿಹಳು.

***ಬಸವನ ಭಕ್ತಿಯ ನಿಜ ಸಮಾಧಿಯ ಸುಖವ ಕರುಣಿಸುವ ಅಯ್ಯ ಬಸವನ :***

ಬಸವನ ಭಕ್ತಿಯ ನಿಜ ಸಮಾಧಿಯ ಸುಖವದು "ಸಂಯೋಗ ವಿಯೋಗವೆಂಬೆರಡಿ ಲ್ಲದ ನಿಜವನಾರಯ್ಯ ಬಲ್ಲವರು.? ಅದು ಕೂಡಿ ಬೆರಸದು ಅಗಲಿ ಹಿಂಗದು ತೆಗಹಕ್ಕೆ ಬಾರದು, ಮೊಗಹಕ್ಕೆ ಸಿಲುಕದು. ಸಗುಣ, ನಿರ್ಗುಣವೆಂಬ ಬಗೆಗೆಡೆಗೊಡದ ಸೌರಾಷ್ಟ್ರ ಸೋಮೇಶ್ವರ ಲಿಂಗವನರಿವುದೇನು ಮರೆವುದೇನು" ನಿಜ ಸಮಾಧಿಯ ಸುಖವದು ಕೂಡದ ಗಲದ ಎರಡಿಲ್ಲದ ನಿಜ ಸಮಾಧಿ ಸುಖ. ನಿಜವದು ಆವುದರೊಳ ಕೂಡದ್ದು, ಅಗಲಿ ಹಿಂಗದು. ಇದಲ್ಲವೆನ್ನಲು ಬರದು. ಇದು ಅಹುದು ಎನ್ನಲು ಬರದು. ಸಗುಣ ನಿರ್ಗುಣ ವೆಂಬ ವಿಧಾನಕ್ಕೆಡೆಗೊಡದ ಸೌರಾಷ್ಟ್ರ ಸೋಮೇಶ್ವರ ಲಿಂಗವು ಅರಿಯಬಾರದ ಘನವು. ಇಂತಪ್ಪ ಅರಿಯಬಾರದ ಘನವರಿತು ಅರಿಯದಂತಿದ್ದುದು ಬಸವನ ಭಕ್ತಿಯ ನಿಜ ಸಮಾಧಿ ಯ ಕರುಣಿಸುವ ಅಯ್ಯ ಬಸವನ ಎಂದು ಹೇಳಿಹಳು.

***ಸಂಗಯ್ಯನ ಪ್ರಸಾದಿಯಾದ ಬಸವನ ಕಾಣಿರೇ ಭಕ್ತರು ! :*** ಸಂಗಯ್ಯನ ಪ್ರಸಾದ

ತೆರಹಿಲ್ಲದ ಘನದಿರುವ ಅರಿದರಿದು ತಾನೆ ಆಗಿಹ ಪ್ರಸಾದ. ಅವಿನಾಶಿ ಪ್ರಸಾದ, ಇಂತಪ್ಪ ಅವಿನಾಶಿ ಪ್ರಸಾದಿಯಾದ ಬಸವನ ಕಾಣಿರೊ ! ಎಂದು ಹೇಳಿಹಳು.

# ತನುವಿನೊಳಗೆ ಅರಿವು ಅಡಗಿದೆ

**ಐಕ್ಯವ ತೋರಿ ಅಜಾತನಲ್ಲಿ ಅಡಗಿದ ಬಸವಾ,**
**ಅರ್ಪಿತದಲ್ಲಿ ನಿರಾಭಾರಿಯಾದ ಬಸವಾ,**
**ಆನು ಸುಖ ಸಂಯೋಗಿಯಾದೆ ನಿಮ್ಮಲ್ಲಿ ಬಸವಾ,**
**ಎನಗೆ ಹೆಸರಳಿಯಿತ್ತು ಕುರುಹಳಿಯಿತ್ತು ಬಸವಾ,**
**ಸಂಗಯ್ಯ ನಿನ್ನೊಳಡಗಿ ನೀನೆನ್ನೊಳಡಗಲು.**

**ತಾತ್ಪರ್ಯ : *ಐಕ್ಯವ ತೋರಿ ಅಜಾತನಲ್ಲಿ ಅಡಗಿದ ಬಸವಾ* :** ಗುರುವಿಂಗೆ ಗುರುವಾಗಿ ಗುರು ಪ್ರಸಾದಕೊಂಡುದು ತೋರಿದುದೆ ಐಕ್ಯವ ತೋರಿದುದು. ತಾನು ಗುರು ಲಿಂಗದಲ್ಲಿ ಲೀಯವಾದುದು ಅಜಾತನಲ್ಲಿ ಅಡಗಿದ ಬಸವಾ. ಬೋಧವು ಹೆತ್ತರಿವು ಆಗಿ ತಾನೆ ಸ್ವಯಂಜ್ಯೋತಿ ಲಿಂಗವಾಗಿ ಬೆಳಗಿಂಗೆ ಬೆಳಗಾಗಿ ಶಬ್ದಮುಗ್ಧವಾದುದು. ಇದು ಐಕ್ಯವ ತೋರಿ ಅಜಾತನಲ್ಲಿ ಅಡಗಿದ ಬಸವಾ. ಭೋದವು ಹೆತ್ತರಿವು ಆಗಿ ತಾನೆ ಸ್ವಯಂಜ್ಯೋತಿ ಲಿಂಗವಾಗಿ, ಬೆಳಗಿಂಗೆ ಬೆಳಗಾಗಿ ಶಬ್ದಮುಗ್ಧವಾದುದು.

ಇದು ಐಕ್ಯವ ತೋರಿ ಅಜಾತನಲ್ಲಿ ಅಡಗಿದ ಬಸವಾ ಎಂದು ಹೇಳಿಹಳು.

***ಅರ್ಪಿತದಲ್ಲಿ ನಿರಾಭಾರಿಯಾದ ಬಸವಾ* :**

ಅರ್ಪಿತದ ರಹಸ್ಯವ ತಿಳಿದ ಬಸವನಾದುದರಿಂದ ನಿರಾಭಾರಿ ಎಂದು ಹೇಳಿಹರು. ತನು, ಮನ, ಧನ ಕಾಣದಾತ, ಕಂಡವನಾದಲ್ಲಿ ಅರ್ಪಿಸುವ ಭಾರವುಳ್ಳವನಾಗುತ್ತಿದ್ದ. ತನು, ಮನ, ಧನ ಇದ್ದುದು ಕಂಡಾತನಲ್ಲ. ತನುವಿಲ್ಲ, ಮನವಿಲ್ಲ, ಧನವಿಲ್ಲವೆಂಬುದು ಕಂಡಾತ ನಲ್ಲ, ಇಲ್ಲವೆಂಬುದು ಇಲ್ಲವೆಂದು ತಿಳಿದುದರಿಂದ ಅರ್ಪಿತದಲ್ಲಿ ನಿರಾಭಾರಿಯಾದ. "ಆನು ನೀನೆಂಬುದಿಲ್ಲ ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದಿಲ್ಲಾದುದೆಂದಿಪ್ಪುದು? ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು."

ಅರ್ಪಿತದಲ್ಲಿ ನಿರಾಭಾರಿಯಾದುದರಿಂದ ಆನೆಂಬುದಿಲ್ಲ, ನೀನೆಂಬುದಿಲ್ಲ, ಇಲ್ಲವೆ ನ್ನುವ ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ, ತಾನು ಏನನ್ನು ಅರಿಯುವುದು ? ತನ್ನನ್ನು ಅರಿಯುವುದು. ತನ್ನನ್ನು ಆವುದರಿಂದ ಅರಿವುದು ? ತನುವಿನಿಂದ ಅರಿಯುವುದೊ ಇಂದ್ರಿ ಯಂಗಳಿಂದ ಅರಿಯುವುದೊ ? ಪ್ರಾಣಾದಿಗಳಿಂದ ಅರಿಯುವುದೊ ? ಮನಬುದ್ಧ್ಯಾದಿಗ ಳಿಂದ ಅರಿಯುವುದೊ ? ಇವೆಲ್ಲವುಗಳು ತನ್ನಿಂದ ತಿಳಿಸಿಕೊಳ್ಳುವ ಅನಾತ್ಮಗಳು. ಅನಾತ್ಮ ದಿಂದ ಆತ್ಮನನ್ನು ತಿಳಿಯಬಹುದೆ ? ಆಗದು. ಇವುಗಳಿಂದ ಆಗದಿದ್ದ ಮೇಲೆ ಮತ್ತಾವ ಸಾಧನೆಯಿಂದ ತನ್ನ ಅರಿಯುವುದು. ಅರಿಯುವ ದೃಕ್‌ನಿಂದ ತನ್ನನರಿಯಬಹುದೆ ? ಸಾಕ್ಷಿ, ಅಸಂಗ, ದೃಕ್, ಪ್ರತ್ಯಗಾತ್ಮ, ಪರಮಾತ್ಮ, ಕೂಟಸ್ಥ, ಸಚ್ಚಿದಾನಂದ, ನಿತ್ಯ ಪೂರ್ಣವೆಂಬ ಲಕ್ಷಣ ದಿಂದಲಾದರೂ ತನ್ನ ಅರಿಯಬಹುದೆ ? ಇವುಗಳು ಕೂಡ ತನ್ನಿಂದ ಸಿದ್ಧವಾಗುವವು. ತನ್ನನ್ನು ಇವುಗಳು ಸಿದ್ಧಮಾಡವು. ತಾನು ಇವುಗಳಿಗೆ ಸಮಸ್ವರೂಪನು, ಸಮಪ್ರಕಾಶನು. ತಾನು

ನಿರಂತರ ಇದ್ದಂತಿದ್ದ ಸ್ವಮಹಿಮನು. ತಾನು ಅರಿಸಿಕೊಳ್ಳುವುದು ಆಗದವನು. ಅರಿಯು ವುದು ಆಗದವನು. ತಾನು ಅರಿಯಿಲಿಲ್ಲದ ಅರುವು, ಇಂತಪ್ಪ ಅರಿಯಲಿಲ್ಲದ ಅರುವು ಅರಿದ ಬಳಿಕ ಇಲ್ಲಿ ಅರಿಸಿಕೊಳ್ಳುವುದು ಏನೂ ಇಲ್ಲ. ಅರಿವುದು ಏನೂ ಇಲ್ಲ. ಈ ಇಲ್ಲ ವೆಂಬುದು ಇಲ್ಲಾದುದು ಇದು ಎಂದು ಇತ್ತು. ಇಲ್ಲವೆಂಬುದು ಇಲ್ಲಾದುದು ಇದು ಹೇಗಿತ್ತು ? ಇದು ಕಾರಣ ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವಾಗಿಹ ಅರಿಯಬಾರದ ಘನ ವಾಗಿ ತನ್ನ ಅರಿಯುವುಡೆ ಆಗ ತನು ರೂಪಿ ಅಹಂಕಾರವ ಮರೆಯುವುಡೆ ಭಾವರಹಿತ ಗುಹೇಶ್ವರ ನಿರವಧಿ ತಾನೆ, ನಿಶ್ಚಿಂತ ತಾನೆ. ತನ್ನ ಉಪಮಿಸಲಿಲ್ಲ ನೋಡಾ. ಇಂತಪ್ಪ ಅರ್ಪಿತದ ರಹಸ್ಯವರಿತುದದಿಂದ ಅರ್ಪಿತದಲ್ಲಿ ನಿರಾಭಾರಿಯಾದ ಬಸವನೆಂದು ಹೇಳಿಹಳು.

***ಆನು ಸುಖ ಸಂಯೋಗಿಯಾದೆ ನಿಮ್ಮಲ್ಲಿ ಬಸವ :***

ಬಸವ ಪ್ರಭುವಿನ ನಡೆ ನುಡಿ ತೆರಹಿಲ್ಲದ ಲಿಂಗ ನುಡಿ, ತೆರಹಿಲ್ಲದ ಲಿಂಗ ನಡೆ, ತೆರಹಿಲ್ಲದ ಲಿಂಗದ ವಿಶ್ರಾಮ ಸುಖದ ಸುಖವಾದುದರಿಂದ ಆನು ತೆರಹಿಲ್ಲದ ಲಿಂಗದ ನುಡಿ, ತೆರಹಿಲ್ಲದ ಲಿಂಗದ ನಡೆಯುಳ್ಳವಳಾಗಿ ಸುಖದ ಸುಖವಾಗಿಹ ಸುಖದಲ್ಲಿ ಲೀಯ ವಾದೆ ಸಮರಸವಾದೆ ನಿಮ್ಮಲ್ಲಿ ಬಸವಾ ಎಂದು ಹೇಳಿಹಳು.

ಸಂಗಯ್ಯ ನಿನ್ನೊಳಡಗಿ ನೀ ನೆನ್ನೊಳಡಗಲು, ಓ! ಬಸವೇಶ ಸಂಗಯ್ಯ ನಿನ್ನೊಳಡಗಿ ದನೆ ! ಅಬ್ಬಾ, ನೀನೆಂತಪ್ಪ ಮಹಾ ಮಹಿಮನು. ಸಂಗಯ್ಯನು ನಿನ್ನೊಳಡಗಿದನೆ ? ನಿನ್ನ ದೆಂಥ ಅರುಹೃದಯ, ನುಡಿಗೆಡೆಗೊಡದ ಘನನಾಗಿಹ ಬಸವನಲ್ಲಿ ತೆರಹಿಲ್ಲದ ಲಿಂಗಭರಿತ ವೆಂಬ ಸಂಗಯ್ಯನು ಅಡಗಿದನೆ ? ಅಂದರೆ ನುಡಿಗೆಡೆಗೊಡದ ಘನದಲ್ಲಿ ತೆರಹಿಲ್ಲದ ಲಿಂಗಭರಿತವೆಂಬ ನುಡಿ ನಷ್ಟವಾಯಿತ್ತೆ ? ಈ ರಹಸ್ಯ ಸಂಜ್ಞೆಯಿಂದ ಅರಿದರಿದು ನೋಡು ವುದು. ಆಗ ಸಂಗಯ್ಯ ನಿನ್ನೊಳಡಗಿ ಎಂಬುದು ತಿಳಿವುದು.

ನೀನೆನ್ನೊಳಡಗಲು ಓ ಬಸವೇಶ, ನುಡಿಗೆಡೆಗೊಡದ ಘನವಾಗಿಹ ನಿನ್ನರಿವು ಎಂಬು ದು ನೀನು. ಇಂತಪ್ಪ ಅರುವು ಎನ್ನೊಳಡಗಲು ಇದು ಶಬ್ದಕರಗಿಸುವ ಅರುವಿಂಗರುವಾಗಿಹ ಅರುಹೃದಯ. ಇಂತಪ್ಪ ಅರುಹೃದಯದಲ್ಲಿ ಶಬ್ದ ನಷ್ಟ ಮಾಡುವ ಹಾಗೂ ಗುರು ಕಾರುಣ್ಯ ವುಳ್ಳ ಪಕ್ವವಾಗಿಹ ಹೃದಯದಲ್ಲಿ ಅರಿದರಿದು ನೋಡಿದಾಗ ನಿರವಧಿಯಾಗಿಹ ನಿರುಪಮದಿ ರುವು ಕಾಣಬಹುದು. ಇಲ್ಲಿ "ಮಹವು ಮಹದಾನಂದದಲಕ್ಕಾಡಿ ಮತ್ತಲ್ಲಿಯೆ ಲೀಯವಾ ಗಿರ್ದುದು" ಏಕೆಂದರೆ ನಿಮ್ಮಿಂದ ನೀವೆ ಆಗಿಹ ಸ್ವಯಂಭುವಿನ ಮಹದಾಟವೆಂದು ತಿಳಿ ವುದು.

# ಮಹಾಜ್ಞಾನವೆಂಬ ತನುವೇ ಕಲ್ಯಾಣ

**ಕಲ್ಯಾಣವಿಲ್ಲ, ಕೈಲಾಸವಿಲ್ಲ ಬಸವಾ,**
**ಕಲ್ಯಾಣವಿಲ್ಲದ ಕಾರಣ ಕೈಲಾಸವಿಲ್ಲವೆನಗೆ ಬಸವಾ,**
**ಆ ಕಲ್ಯಾಣ ಕೈಲಾಸವಾಯಿತ್ತು ಬಸವಾ.**
**ಆ ಕಲ್ಯಾಣವಳಿದು ಕೈಲಾಸವಾದ ಬಳಿಕ ಬಸವನ ಮೂರ್ತಿಯಿಲ್ಲ.**
**ಬಸವನ ಮೂರ್ತಿಯನರಿಯದ ಕಾರಣ ಕೈಲಾಸವಿಲ್ಲ ಕಲ್ಯಾಣವಿಲ್ಲವಯ್ಯಾ ಸಂಗಯ್ಯ.**

**ತಾತ್ಪರ್ಯ : ಕಲ್ಯಾಣವಿಲ್ಲ, ಕೈಲಾಸವಿಲ್ಲ ಬಸವಾ :**

ನೀಲಮ್ಮ ತಾಯಿಯು ಕಲ್ಯಾಣವಿಲ್ಲ..... ಕೈಲಾಸವಿಲ್ಲವೆಂದು ಬಿತ್ತರಿಸಿದುದು ನೋಡುವುಡೆ ಬಹು ಬೆರಗುಗೊಳ್ಳುವ ವಿಷಯವು. ಲೌಕಿಕರಾಗಲಿ ಭಕ್ತರಾಗಲಿ ಭಾವಿಕರಾಗಲಿ ತಪಸ್ವಿ ತ್ಯಾಗಿ ಯೋಗಿಗಳಾಗಲಿ ಕಲ್ಯಾಣವುಂಟು ಕೈಲಾಸವುಂಟು ವೈಕುಂಠವುಂಟು ಎಂದು ನಂಬಿದ ಭಾವಿಕರಾಗಿಹರು. ವಿಷ್ಣುವಾಸಿಸುವ ಸ್ಥಾನವದು ವೈಕುಂಠ. ಶಿವನು ವಾಸಿಸುವ ಸ್ಥಾನವದು ಕೈಲಾಸ. ಗುರು ಘನನು ವಾಸಿಸುವ ಸ್ಥಾನವದು ಕೈವಲ್ಯವೆಂದು ಪುರಾಣಂಗಳು ಕೊಂಡಾಡುತ್ತಿಹವು.

ಇನ್ನು ಕೆಲವರು ಲೌಕಿಕರು ವಧು-ವರರು ಒಂದುಗೂಡಿಸುವ ವಿವಾಹ ಕಾರ್ಯಕ್ಕೂ ಕಲ್ಯಾಣವೆನ್ನುವರು. ಹಾಗೆಯೇ ಗುರು ಶಿಷ್ಯರು ಒಂದು ಗೂಡುವ ಅರುಹೃದಯದ ಕಾರ್ಯಕ್ಕೂ ಕಲ್ಯಾಣ, ಶ್ರೀಗುರು ಸ್ಥಾನವದು ಕಲ್ಯಾಣ. ಆ ಮಹಾಂತನಿಂದ ಹೊರಹೊಮ್ಮಿ ಬರುವ ಜ್ಞಾನಾಮೃತವೂ ಕಲ್ಯಾಣವಾಗಿದೆ. ನಿರಂತರವಾಗಿರುವ ಪರಮಸತ್ಯವೆ ಕಲ್ಯಾಣವು. ಆ ಪರಮಸತ್ಯ ಅಭೇದ್ಯಸತ್ಯವದು ಜ್ಞಾನಾಮೃತವು. ಇಂತಪ್ಪ ಪರತತ್ವವರಿತ ಮಹಾಘನವೆ ಶ್ರೀಗುರು. ಆ ಮಹಾಂತನ ಕರುಣಾಮಯ ಹೃದಯದಿಂದ ಹೊರಹೊಮ್ಮಿ ಬರುವ ಜ್ಞಾನವೆ ಕಲ್ಯಾಣವಾಗಿದೆ. ಜ್ಞಾನಾನಂದವಾರಿಗೆ ತನ್ನಿರುವು ಆಗಿಹುದು ಅದು ಕೈಲಾಸವಾಗಿದೆ. ಇನ್ನು ಕಲ್ಯಾಣ, ಕೈಲಾಸ ವಿಷಯದಲ್ಲಿ ಬಹುವಿಧವಾಗಿ ಹೇಳಿಹರು.

ಆತ್ಮನಿಗೆ ಕಲ್ಯಾಣವೆಂದು, ಆತ್ಮಭೋದಕ್ಕೂ ಕಲ್ಯಾಣ, ನಿತ್ಯಾನಿತ್ಯ ವಿಚಾರವೆ ಕಲ್ಯಾಣ ಆತ್ಮ ನಿಶ್ಚಯವಾದುದೆ ಕೈವಲ್ಯ. ಕೈಲಾಸ. ಪುರುಷಾರ್ಥ ಜ್ಞಾನವದು ಕಲ್ಯಾಣ. ನಮಃಶಿವಾಯ, ಓಂ ನಮಃ ಶಿವಾಯ, ಉಚ್ಚರಿಸುವುದು ಕಲ್ಯಾಣ. ಓಂಕಾರ ತ್ರಾಟಕ ಮಾಡುವುದು ಕಲ್ಯಾಣ. ಓಂಕಾರ ಸ್ಮರಣವಾಗಲಿ, ಧಾರಣ ಧ್ಯಾನ ಸಮಾಧಿಯಾಗಲಿ ಕಲ್ಯಾಣವಾಗಿಹುದು. ಇದರ ಅರ್ಥ ಪ್ರಣವದರ್ಥವ ತಿಳಿಯುವುದೆ ಕೈಲಾಸವಾಗಿದೆ.

ಮಾಂಸ ಪಿಂಡವ ಕೆಡಿಸಿ ಮಂತ್ರ ಪಿಂಡ ಮಾಡುವುದು ಕಲ್ಯಾಣ. ಅಂಗದ ಮೇಲೆ ಲಿಂಗ ಸಾಹಿತ್ಯ ಮಾಡುವುದು ಕಲ್ಯಾಣ. ಪ್ರಾಣದ ಮೇಲೆ ಲಿಂಗ ಸಾಹಿತ್ಯ ಮಾಡುವುದು ಕಲ್ಯಾಣ. ಮನದ ಮೇಲೆ ಲಿಂಗ ಸಾಹಿತ್ಯ ಮಾಡುವುದು ಕಲ್ಯಾಣ. ಲಿಂಗಸಾಹಿತ್ಯವದು ಅರಿದರಿದು ನೋಡುವ ಹೃದಯವೆ ಕೈಲಾಸವಾಗಿದೆ. ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹನೆ ಕೊಟ್ಟಿಹನು ಇದನು ಅರಿಯದೆ ಕುರುಹ ಪೂಜಿಸುವವರಾಗಿಹರು. ಅವರಿಗೆ ಕಲ್ಯಾಣವಿಲ್ಲ ಕೈಲಾಸವಿಲ್ಲ. ಮಂತ್ರಪಿಂಡವಾಗದೆ ಮಾಂಸ ಪಿಂಡವಾದುದರಿಂದ ಕಲ್ಯಾಣವಿಲ್ಲ, ಕೈಲಾಸವಿಲ್ಲ, ಆರಿಗೆ ಅಂಗದ ಮೇಲೆ ಲಿಂಗ ಸಾಹಿತ್ಯವಾದರೂ ಅಂಗವು ಲಿಂಗವಾಗಿಲ್ಲವೆಂದಲ್ಲಿ ಕಲ್ಯಾಣವಿಲ್ಲ, ಕೈಲಾಸವಿಲ್ಲ, ಮನದ ಮೇಲೆ ಲಿಂಗ ಸಾಹಿತ್ಯವಾದರೂ ಮನದ ಸಂಕಲ್ಪ ವಿಕಲ್ಪ ನಷ್ಟವಾಗದ್ದರಿಂದ ಕಲ್ಯಾಣವಿಲ್ಲ ಕೈಲಾಸವಿಲ್ಲವೆಂದು ಹೇಳಿಹರು. ಆತ್ಮಬೋಧ ಕಲ್ಯಾಣವಿದ್ದುದರಿಂದ ಆ ಬೋಧ ತಿಳಿಯದುದರಿಂದ ಕಲ್ಯಾಣವಿಲ್ಲ, ಕೈಲಾಸವಿಲ್ಲ. ನಿತ್ಯಾನಿತ್ಯ ವಿಚಾರ ತಿಳಿಯುವುದರಿಂದ ಅಲ್ಲಿಯೆ ತಾನಾರೆಂಬ ತನ್ನಿರವು ವೇದ್ಯವಾಗುವದಿದ್ದು, ತಿಳಿದಿಲ್ಲವೆಂದಲ್ಲಿ ಕಲ್ಯಾಣವಿಲ್ಲ, ಕೈಲಾಸವಿಲ್ಲ.

**ಆ ಕಲ್ಯಾಣ ಕೈಲಾಸವಾಯಿತ್ತು ಬಸವ :**

ನಿರಂತರವಾಗಿರುವ ತನ್ನಿರವು ಮಂಗಲಮಯವು, ತಾನು ಸತ್ಯವೆನ್ನುವುದರ ಪರಮಸ

ತ್ಯವು. ಈ ರಹಸ್ಯ ತನ್ನಿಂದ ತನಗದು ವೇದ್ಯವಾದುದೆ ಕಲ್ಯಾಣ. ಅದು ಸುಖದ ಸುಖವಾದು ದರಿಂದ ಸುಖ ಸುಖವೆನ್ನುವ ಹಲುಬಾಟವಿಲ್ಲ, ಚಿಂತನವಿಲ್ಲ ಭಾವಕ್ಕಿಂಬಿಲ್ಲ. ತನ್ನಿರವು ಸುಖವೆನ್ನದ ಸುಖ ಸ್ವರೂಪವಾದುದರಿಂದ ಕೈಲಾಸವಾಯಿತ್ತು. ಆ ಕಲ್ಯಾಣ ಕೈಲಾಸವಾಯಿತ್ತೆ ? ಇದು ತನ್ನ ಅಂತರಂಗದಲ್ಲಿದ್ದ ಗುರುವಿಂಗೆ ಗುರುವಾಗಿಹ ಗುರುಲಿಂಗದಿರುವು. ಲಿಂಗಕ್ಕೆ ಲಿಂಗವಾಗಿಹ ತನ್ನಂತರಂಗದಲ್ಲಿದ್ದ ನಿಕ್ಷೇಪವು. ಇದುವೆ ದೇಹಿಗೆ ದೇಹಿಯಾದ ಮಹಾಘನ. ಅರುವಿಂಗರುವಾಗಿಹ ಅರಿಯಲಿಲ್ಲದ ಅರುವು. ಇಂತಪ್ಪ ರಹಸ್ಯವರಿತ ಶರಣನ ಇರುವೆ ಕಲ್ಯಾಣ. ಅದುವೆ ಸುಖದ ಸುಖವಾದುದರಿಂದ ಕೈಲಾಸವಾಯಿತ್ತು.

***ಆ ಕಲ್ಯಾಣವಳಿದು ಕೈಲಾಸವಾದ ಬಳಿಕ ಬಸವನ ಮೂರ್ತಿಯಿಲ್ಲ* :**

ಕಲ್ಯಾಣವಳಿಯಲು ಕಲ್ಯಾಣವೆಂಬ ಸಂಜ್ಞೆ ನಷ್ಟವಾಗಬೇಕು. ಇದು ನಷ್ಟವಾಗಬೇಕಾದಲ್ಲಿ ಮನ ನಷ್ಟ, ಭೋದ ನಷ್ಟ, ಅರ್ಪಿತ ನಷ್ಟ, ಭಾವ ನಷ್ಟ, ಗಮನ ನಷ್ಟ, ಆಚಾರ ನಷ್ಟ ಈ ಆರು ನಷ್ಟವಾದಲ್ಲಿ ಕಲ್ಯಾಣವಳಿದು ಅಂದರೆ ಆತ್ಮನೆಂಬುದು ನಷ್ಟ, ಗುರು, ಲಿಂಗ, ಜಂಗಮ ಪ್ರಸಾದವೆಂಬ ಚತುರ್ವಿಧ ನಷ್ಟವಾಗಿ ಮುನ್ನೆಲ್ಲಿಂದ ಬಂದ ನಲ್ಲಿಗೆ ಹೋಗಿ ನಿತ್ಯನಾಗಿಹ ಅವಿನಾಶಿ ಪ್ರಸಾದಿಯಾದುದರಿಂದ ಕಲ್ಯಾಣವಳಿದು ಕೈಲಾಸವಾದ ಬಳಿಕ ಬಸವನ ಮೂರ್ತಿ ಇಲ್ಲ. ಭೋದ ನಷ್ಟವಾಗಿ ಗುರುಲಿಂಗವಾಗಿಹ ತನ್ನಿರವು ಪ್ರಜ್ವಲಿಸುವಲ್ಲಿ ಬಸವನ ಮೂರ್ತಿ ಇಲ್ಲವೆಂದು ಹೇಳಿಹರು.

***ಬಸವನ ಮೂರ್ತಿಯನರಿಯದ ಕಾರಣ, ಕೈಲಾಸವಿಲ್ಲ, ಕಲ್ಯಾಣವಿಲ್ಲ ಸಂಗಯ್ಯ* :**

ಬಸವನ ಮೂರ್ತಿ ಅದು ತೆರಹಿಲ್ಲದ ವಸ್ತು. ಅದು ಗುರುಲಿಂಗ ಅದು ಸ್ವಯಲಿಂಗ, ಅದು ಲಿಂಗ ಒಂದಾಗಿರ್ದ ಜಂಗಮವಾದುದರಿಂದ ನಿರ್ಲಿಖಿತ ಜಂಗಮ ಬಸವ. ಇಂತಪ್ಪ ಬಸವನ ಮೂರ್ತಿಯನರಿಯದ ಕಾರಣ ಕೈಲಾಸವಿಲ್ಲ, ಕಲ್ಯಾಣವಿಲ್ಲವೆಂದು ಹೇಳಿಹರು.

# ಕಲ್ಲಿನ ಮಾಲೆಯನ್ನು ಕಡಿದಾತ ಬಸವ

**ಕಲ್ಲ ಮಾಲೆಯ ಕಡಿದಾತ ಬಸವಯ್ಯನು,**
**ಕಾಲನ ಗೆಲಿದಾತ ಬಸವಯ್ಯನು,**
**ಎಲ್ಲವ ಮರೆದಾತ ಬಸವಯ್ಯನು,**
**ಜ್ಞಾನವನರಿದಾತ ಬಸವಯ್ಯನು,**
**ಸಂಗಯ್ಯನಲ್ಲಿ ಬೆರದು ನಿಃಪತಿಯಾದಾತ ನಮ್ಮ ಬಸವಯ್ಯನು.**

**ತಾತ್ಪರ್ಯ : *ಕಲ್ಲ ಮಾಲೆಯ ಕಡಿದಾತ ಬಸವಯ್ಯನು* :**

ಕಲ್ಲ ಮಾಲೆಯ ನೋಡಿರೆ ! "ಪೃಥ್ವಿಗೆ ಹುಟ್ಟಿದ ಶಿಲೆ ಕಲ್ಲು ಕುಟಿಗಂಗೆ ಹುಟ್ಟಿದ ಮೂರುತಿ. ಗುರುಮಂತ್ರಕ್ಕೆ ಲಿಂಗವಾಯಿತ್ತಲ್ಲಾ, ಈ ಮೂವ್ವರಿಗೆ ಹುಟ್ಟಿದ ಮಗುವೆ ಲಿಂಗವೆಂದು ಕೈವಿಡಿದ ಅಚ್ಚ ವ್ರತಗೇಡಿಗಳನೇನೆಂಬೆ ಗುಹೇಶ್ವರಾ."

ಇಂತಪ್ಪ ಕಲ್ಲ ಮಾಲೆಯ ಕಡಿವಾತ ಬಸವಯ್ಯ. ಕಲ್ಲ ಮಾಲೆಯ ನಷ್ಟ ಮಾಡಿದ

ಘನವ  ನೋಡಿರೆ ! ಇದು ತೆರಹಿಲ್ಲದ ಲಿಂಗಭರಿತನೆಂದು ಕಲ್ಲಮಾಲೆಯ ಕೆಡಿಸಿದ ಕರುಣೆಯ ಕಾಣಿರೆ ಇದು ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗವೆಂದು ಕಲ್ಲ ಮಾಲೆಯ ಕಡಿದುದು, ಇತ್ತ "ಆಚಾರ್ಯ ಕುಟ್ಟಿಲವ ಕೊಟ್ಟು ಹೋದನಲ್ಲ, ಮಹೇಂದ್ರ ಜಾಲದೊಳಗೆ ಭ್ರಾಂತರಾದರೆಲ್ಲರು. ಆಚಾರ್ಯನ ಸುಟ್ಟರುಹಿದೆ ಕುಟಲವ ಮೆಟ್ಟೊರಿಸಿದೆ ಎನಗಾಚಾರ್ಯನಿಲ್ಲದೆ ಹೋಯಿತ್ತು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ನಿಲ್ಲುಮಾಣು. ಕಲ್ಲ ಮಾಲೆಯ ಕಡಿದ ಕಥೆಯ ನೋಡಿರೆ ! ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲು ಕುಟಿಗಂಗೆ ಹುಟ್ಟಿದ ಮೂರುತಿ, ಗುರುಮಂತ್ರಕ್ಕೆ ಲಿಂಗವ ಮಾಡಿ, ಇದು ಲಿಂಗವೆಂದು ಆಚಾರ್ಯ ಕುಟಿಲ ಕೊಟ್ಟಿಹನು ಲಿಂಗವೆಂದು ಲಿಂಗಾರ್ಚನೆಯ ಮಾಡಿ ಲಿಂಗಾರ್ಚನೆಯಲ್ಲಿ ಫಲವುಂಟು ಪದವುಂಟೆಂದು ಮಹೇಂದ್ರ ಜಾಲದೊಳಗೆ ಭ್ರಾಂತರಾದರೆಲ್ಲರು.

ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲು ಕುಟಿಗಂಗೆ ಹುಟ್ಟಿದ ಮೂರುತಿ  ಗುರು ಮಂತ್ರದಿಂದ ಲಿಂಗ ಮಾಡಿದೆವೆನ್ನುವ ಆಚಾರ್ಯರ ಸುಟ್ಟುರುಹಿದೆ. ಕುರುಹೆ ಲಿಂಗವೆಂಬ ಕುಟಿಲವ ಮೆಟ್ಟೊರಿಸಿದೆ. ಇಂತಪ್ಪ ಕುರುಡ ಆಚಾರ್ಯರು ಎನಗಿಲ್ಲವೆಂದು ಸದ್ಗುರುನಾಥ ಕೊಟ್ಟುದು ತೆರಹಿಲ್ಲದ ಲಿಂಗ ಭರಿತವೆಂದು ಅರಿಯ ಹೋದೆ. ಅರಿದರಿದು ಮಾತಿಲ್ಲದವನೆಂದೆ. ಈ ಮಾತಿಲ್ಲದವನ ಕೂಡ ಮಾತನಾಡ ಹೋದೆ. ಎನ್ನ ಮಾತಿನ ಪ್ರಸಂಗಕ್ಕೆ ಒಪ್ಪದ್ದು ಕಂಡು ಮಾತಿನ ಹಂಗ ಹರಿದು ಮಾತಾಡುವ ಮಾತಿನ ಪ್ರಸಂಗ ಕೆಡಿಸಿ ಮಾತಿಲ್ಲದವನಲ್ಲಿ ಪರವಶ ವಾದುದು ಅದನೆಂತು ಬಣ್ಣಿಸುವುದು.

ಭಾಷೆ ಪ್ರಸಾದಕ್ಕೆ ಸಿಲುಕದ ಮಾತಿಲ್ಲದವನಿಗೆ ತೆರಹಿಲ್ಲವೆಂದುದು ತಪ್ಪು, ಲಿಂಗ ವೆಂದುದು ತಪ್ಪು, ಭರಿತವೆಂದುದು ತಪ್ಪು, ಈ ತಪ್ಪಿನ ರಹಸ್ಯ ತಿಳಿದಾಗ ಮಾತಿಲ್ಲದವನ ಇರುವೆ ಪರವಶವಾಗಿ ಕಲ್ಲ ಮಾಲೆಯ ಕಡಿವಾತ ಬಸವಯ್ಯನು ಎಂದು ಹೇಳಿಹಳು.

***ಕಾಲನ ಗೆಲಿದಾತ ಬಸವಯ್ಯನು*** :

ಉದಯಾಸ್ತದಿಂದುಕ್ತವಾದವುಗಳು ಕಾಲಂಗಳು. ಈ ಕಾಲಂಗಳ ನುಂಗುವಾತ ಕಾಲ ನಾಗಿಹನು. ಕಾಲನ ವಿಷಯದಲ್ಲಿ ಬಹುರೂಪವಾಗಿ ಹೇಳಿಹರು. ಬ್ರಹ್ಮಾಂಡ ಪಿಂಡಾಂಡ ನಷ್ಟ ಮಾಡಲು ಬ್ರಹ್ಮನೆ ಕಾಲನಾಗಿಹನು. ಇಂತಪ್ಪನಿಗೆ ಬ್ರಹ್ಮಾಂಡವನ್ನು ಬ್ರಹ್ಮನನ್ನು ತನ್ನಲ್ಲಿ ಲೀನ ಮಾಡಿಕೊಳ್ಳಲು ವಿಷ್ಣುವೆ ಕಾಲನಾಗಿಹನು. ವಿಷ್ಣು ವಿಷ್ಣುವಿನ ಕಾರ್ಯವನ್ನು ತನ್ನಲ್ಲಿ ಲೀನ ಮಾಡಿಕೊಳ್ಳಲು ರುದ್ರನೆ ಕಾಲನಾಗಿಹನು. ರುದ್ರನಿಗೆ ಈಶ್ವರ ಕಾಲನಾಗಿಹನು. ಈಶ್ವರನಿಗೆ ಸದಾಶಿವನೆ ಕಾಲನಾಗಿಹನು. ಆವುದು ಉದಯಾಸ್ತದಿಂದುಕ್ತವಾಗಿದೆ. ಅದು ಸ್ಥಾವರವೆ ಇರಲಿ, ಜಂಗಮವೆ ಇರಲಿ, ಅದೊಂದು ನಷ್ಟವಾಗಲೇ ಬೇಕು. ನಷ್ಟ ಮಾಡುವ ಶಕ್ತಿಗೆ ಕಾಲ ನೆಂಬ ನಾಮ ಬಂದಿದೆ.

ಇಂತಪ್ಪ ನಷ್ಟ ಮಾಡುವ ಕಾಲನನ್ನೆ ಗೆಲಿದಾತ ಬಸವಯ್ಯನು. ದೃಶ್ಯ ನಷ್ಟ ಮಾಡಲು ದೃಕ್ ರೂಪಾತ್ಮನ  ಜ್ಞಾನಕ್ಕೆ ಬಹು ಸರಳವಾಗಿದೆ. ಆವುದು ದೃಶ್ಯವಾಗಿದೆ ಅದನ್ನು ಅರಿಯ ಹೋಗಲು ಅಲ್ಲಿ ದೃಕ್ ರೂಪಾತ್ಮನ ದರ್ಶನವು. ನಷ್ಟವಾಯಿತ್ತು. ದೃಕ್ಕಿಗೆ ದೃಕ್ಕಾದುದು ಅರಿವುಡೆ ನುಡಿಗೊಳಪಟ್ಟ ದೃಕ್ ನಷ್ಟವು. ದೃಕ್ಕಿಗೆ ದೃಕ್ಕಾದುದು  ನಿರಂತರ ಮಂಗಲಮಯ ಪರಮ ಸತ್ಯವು. ಇಂತಪ್ಪ ಸತ್ಯವರಿತು ಘನಕ್ಕೆ ಘನವಾದಾತ ಬಸವಯ್ಯನಾದುದರಿಂದ ಕಾಲನ ಗೆಲಿದಾತ ನಮ್ಮ ಬಸವಯ್ಯನು ಎಂದು ಹೇಳಿಹಳು.

**ಎಲ್ಲವ ಮರೆದಾತ ಬಸವಯ್ಯನು :**

ನರರು ಸುರರು ಮೊದಲಾದವರು ಪಿಂಡವೆಂಬ ಭಾಂಡದಲ್ಲಿ ಅಡಗಿರುವುದರಿಂದ ಅವರನ್ನು ಮರೆದಾತ. ದೇವಗಣ, ರುದ್ರಗಣ ಪ್ರಮಥಗಣ ಮೊದಲಾವದವರು ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿರುವುದರಿಂದ ಗಣ ಸಮೂಹವ ಮರೆದಾತ. ಇತ್ತ ಸತ್ಯರು, ನಿತ್ಯರು ಮುಕ್ತರು ಎಂಬ ಮಹಾಮಹಿಮರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿರುವುದರಿಂದ ಇವರನ್ನು ಮರೆತವನು ಕ್ಷರವನ್ನು ಮರೆತಾತ ಅಕ್ಷರವೆಂಬುದನ್ನು ಮರೆತಾತ ಮರವು ಅರುವೆಂಬುದನ್ನು ಮರೆತಾತ; ಅರಿವ ಅರುಹಿಸಿಕೊಂಬ ಈ ಉಭಯವ ಮರೆದಾತ. ಅರಿಯಲಿಲ್ಲದ ಅರುವ ಸ್ವೀಕರಿಸಿ ಅದುವೆ ತಾನಾಗಿರುವುದರಿಂದ ಎಲ್ಲವನ್ನು ಮರೆದಾತ ಬಸವಯ್ಯನೆಂದು ಹೇಳಿಹಳು.

**ಜ್ಞಾನವನರಿದಾತ ಬಸವಯ್ಯನು :**

ಸಂಯೋಗ ವಿಯೋಗವೆಂಬೆರಡಿಲ್ಲದ ನಿಜವರಿತುದರಿಂದ ಜ್ಞಾನವನರಿದಾತ ಬಸವಯ್ಯನು. ಕೂಡಿ ಬೆರಸದ ಅಗಲಿ ಹಿಂಗದ ಘನದ ಜ್ಞಾನವ ನರಿದಾತ ಬಸವಯ್ಯ. ಸರ್ವಾತ್ಮನೇತಾತ್ಮವೆಂಬುದಕ್ಕೂ ಸಿಲುಕದ ಜ್ಞಾನವನರಿದಾತ ಬಸವಯ್ಯನು. ಸಗುಣ, ನಿರ್ಗುಣವೆಂಬುದಕ್ಕೂ ಅವಕಾಶಕೊಡದೆ ನಿರವಧಿಯಾಗಿಹ ಜ್ಞಾನವನರಿದಾತನಾದುದರಿಂದ ಸ್ವಯಲಿಂಗವಾದ ಬಸವಯ್ಯನೆಂದು ಹೇಳಿಹಳು.

***ಸಂಗಯ್ಯನಲ್ಲಿ ಬೆರೆದು ನಿಃಪತಿಯಾದಾತ ನಮ್ಮ ಬಸವಯ್ಯನು :***

ಸಂಗಯ್ಯನೆಂಬ ತೆರಹಿಲ್ಲದಭವ ನುಡಿಗೆಡೆಗೊಡದ ಘನದಲ್ಲಿ ಕೂಡಿ ಶಬ್ದಕ್ಕೆ ತೆರಹಿಲ್ಲದಾತ ನಮ್ಮ ಬಸವಯ್ಯನೆಂದು ಹೇಳಿಹಳು.

# ಶಬ್ದ ನಷ್ಟ ಮಾಡಿದ ಗುರುವೆ

**ಕಾಮಿತ ಸುಖವ ಕಂಗೊಳಿಸಿದ ಗುರುವೆ,**
**ಕಲ್ಪಿತದ ನಷ್ಟವ ಮಾಡಿದ ಗುರುವೆ,**
**ಏನಲಿಲ್ಲದ ಮೂರ್ತಿಯೆ, ಎತ್ತಲಡಗಿದೆಯಯ್ಯ ಗುರುವೆ,**
**ಸುಖ ದುಃಖವನೊಂದು ರೂಪವ ಮಾಡಿದ ಗುರುವೆ,**
**ಎತ್ತಲಡಗಿದೆಯಯ್ಯ ಸಂಗಯ್ಯನ ಗುರುಬಸವ.**

**ತಾತ್ಪರ್ಯ : *ಕಾಮಿತ ಸುಖವ ಕಂಗೊಳಿಸಿದ ಗುರುವೆ* :**

ಇದಾರ ಕಾಮಿತ ಸುಖವು, ಇದು ತನ್ನ ಕಾಮಿತ ಸುಖ, ಸುಖವ ಬಯಸುವವರು, ಸ್ವಸುಖವ ಬಯಸುವರು ವಿರಳ. ತನಗಿಂತನ್ಯವಾದ ಅನಿತ್ಯ ಸುಖವ ಬಯಸುವರು. ಸ್ವಸುಖ ಬಯಸುವವರು ವಿರಳ. ತನಗಿಂತನ್ಯವಾದ ಅನಿತ್ಯ ಸುಖವ ಬಯಸುವವರೆ ಹೆಚ್ಚು ಸಿಕ್ಕುವರು. ನರರು ಇಹ ಸುಖವ ಬಯಸಿದರೆ ಸುರರು ಸ್ವರ್ಗ ಸುಖವ ಬಯಸುವರು. ದೇವಗಣ, ರುದ್ರಗಣ, ಪ್ರಮಥ ಗಣ, ತಮ್ಮ ತಮ್ಮ ಪದವಿ ಸುಖಕ್ಕೆ ಒಪ್ಪಿ ನಿಜವಾದ ತಮ್ಮ ಸ್ವಸುಖವ ಬಯಸದಾಗಿಹರು. ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರು ಕೂಡಾ ಚಿದಹಮ್ಮು ಸುಖವೆ ನಿಜವೆಂದು ನಂಬಿ ಬ್ರಹ್ಮಾಕಾರವೃತ್ತಿಯೆ ಶ್ರೇಷ್ಠವಾಗಿ ಚಿದಹಮ್ಮು ಭಾವ

ದಲ್ಲಿದ್ದ ಸುಖವು ನಿಜಸುಖವೆಂದು ತಿಳಿದು ಸ್ವಸುಖದಿಂದ ವಂಚಕರಾದುದು ಕಂಡು ಬಸವ ರಾಜ ದೇವರು "ಪರತತ್ವ ನಿಜ ಸಂಯುಕ್ತರ ಆ, ನೀನೆನ್ನದಿಹ ಶಬ್ದಸುಖಿಗಳ ತೋರ ಎನಗೆ ಎಲೆ ಲಿಂಗವೇ, ಲಿಂಗೈಕ್ಯರ ಲಿಂಗ ಸಂಗಿಗಳ ಲಿಂಗಗೂಡಾಗಿಪ್ಪವರ ತೋರಾ ಎನಗೆ ಅಹೋ ರಾತ್ರಿ ಅವರ ಸೇವೆಯಲ್ಲಿರಿಸು ಕೂಡಲ ಸಂಗಮದೇವಾ."

"ಪರತತ್ವ ನಿಜ ಸಂಯುಕ್ತರೆಂದರೆ ನಿಜವೆಲ್ಲ ತಾನಾಗಿ ತಾನೆಲ್ಲ ನಿಜವಾಗಿ ಒಡಲುಪಾದಿ ಯೆಂಬುದಿಲ್ಲ ನೋಡಾ. ನಿಂದಡೆ ನೆರಳಿಲ್ಲ, ನಡೆದಡೆ ಹೆಜ್ಜೆಯಿಲ್ಲ, ಅಪರಿಮಿತ ಘನ ಮಹಿಮ ನೇನೆಂಬೆನಯ್ಯ. ಶಬ್ದವಿಡಿದು ಸಾರಾಯನಲ್ಲ, ಗತಿವಿಡಿದು ಜಡನಲ್ಲ, ಯರಡ ಳಿದುಳಿದ ನಿಶ್ಚಿಂತನು ತನಗೆ ತಾ ನಿಜವಾದ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುದೇವರೆಂಬ ಜಂಗಮ ಪಾದಕ್ಕೆ ನಮೋ ನಮೋ ಎನುತಿರ್ದೆನು." ಕಾಮಿತ ಸುಖವ ಕಂಗೊಳಿಸಿದ ಗುರು ವಿನ ಘನವನೇನೆಂಬೆ ನಿಜವೆಲ್ಲ ತಾನಾಗಿ ತಾನೆಲ್ಲ ನಿಜವಾಗಿಹ ಸುಖದ ಸುಖವೆನ್ನಲು ಇಂಬು ಗೊಡದೆ ನಿರವಧಿ ಸುಖಕ್ಕೆ ಒಡಲಿಲ್ಲ ನೋಡಾ. ಓಹೋ ! ಆಶ್ಚರ್ಯ ಮಹಾದಾಶ್ಚರ್ಯ. ಸುಖದ ಸುಖ ಬಂದುದು, ಸುಖದ ಸುಖ ನಿಂದುದು ಬಂದುದು ಎನ್ನಲೆ ಹೆಜ್ಜೆಯಿಲ್ಲ, ನಿಂದುದು ಎನ್ನಲೆ ನೆರಳಿಲ್ಲ, ಇದು ಅಪರಿಮಿತ ಘನವಾಗಿಹ ಸುಖ. ನಿಶ್ಯಬ್ದವೇದಿಯ ಮಾಡಿ ನಿಶ್ಚಿಂತತೆಯ ಘನದಿರುವ ಕಂಗೊಳಿಸಿದ ಗುರುವೇ ಎಂದು ಹೇಳಿಹಳು.

***ಕಲ್ಪಿತ ನಷ್ಟ ಮಾಡಿದ ಗುರುವೆ*** : ಇವರಾರು ? ಕಲ್ಪಿತವೆಂದರೇನು ? ತನು, ಇಂದ್ರಿ, ಪ್ರಾಣ, ಮನ, ಬುದ್ಧಿ, ಚಿತ್ತ, ಅಹಂಕಾರ, ಜೀವ ಕಲ್ಪಿತ. ಇತ್ತ ಸಾಕ್ಷಿ ಅಸಂಗ. ಸ್ವಯಂಪ್ರಕಾಶ. ಕೂಟಸ್ಥ ಪ್ರತ್ಯಾಗಾತ್ಮ ಪರಮಾತ್ಮನೆಂಬುದು ಕಲ್ಪಿತ. ಇಂತಪ್ಪ ಅಜ್ಞಾನ, ಜ್ಞಾನ ಕಲ್ಪಿತವನ್ನೇ ನಷ್ಟ ಮಾಡಿದ ಗುರುವೆ. ಓಹೊ! ಮನ ನಷ್ಟ ಮಾಡಿದ ಗುರುವೆ, ಭೋದೆ ನಷ್ಟ ಮಾಡಿದ ಗುರುವೆ, ಭಾವ ನಷ್ಟ ಮಾಡಿದ ಗುರುವೆ, ಗಮನ ನಷ್ಟ ಮಾಡಿದ ಗುರುವೆ, ಅರ್ಪಿತ ನಷ್ಟ ಮಾಡಿದ ಗುರುವೆ, ಇಂತಪ್ಪ ಸಕಲ ಕಲ್ಪಿತ ನಷ್ಟ ಮಾಡಿದ ಗುರುವೆ, ಮಹಾ ಘನ ಗುರುವೆ, ನಿಜದಿರುವ ತೋರಿದ ಶ್ರೀಗುರುವೆ, ಮನ ನಷ್ಟ ಮಾಡಿ ಕೇವಲ ಜ್ಯೋತಿ, ವರ್ಣಾತೀತವಾಗಿಹ, ಘನಲಿಂಗದಿರುವ ತೋರಿದ ಮುಕ್ತಿಯಾದುದರಿಂದ ಎನಗಿಲ್ಲದ ಮೂರ್ತಿಯೇ ಎಂಬ ಸಂಜ್ಞೆಯ ಸೂಚಿಸಿದ ಮಹಾಶಕ್ತಿಗೆ ಏನೆನ್ನಬೇಕು. ಭೋದರೂಪಿ ಹೆತ್ತ ರಿವು ನಷ್ಟ ಮಾಡಿ ತಾನೆಂಬುದ ನಷ್ಟ ಮಾಡಿ ಸಮಸ್ವರೂಪವಾಗಿಹ ನನ್ನಿರುವು ತೋರಿದ ಮೂರ್ತಿಯಾದುದರಿಂದ ಎನಲಿಲ್ಲದ ಮೂರ್ತಿಯೆಂದುಪಮಿಸದ ಅನುಪಮ ಶಕ್ತಿಗೆ ಏನೆನ್ನ ಬೇಕು.

**ಎನಲಿಲ್ಲದ ಮೂರ್ತಿಯೆ** : ಕುರುಹೆ ನಷ್ಟ ಮಾಡಿದ ಮಹಾಂತ ಶಬ್ದ ನಷ್ಟ ಮಾಡಿದ ಮಹಾಂತನಾಗಿ ಅಂಡಜವಳಿದ ಪಿಂಡಜವಳಿದ ಸಾಕಾರವಳಿದ ನಿರಾಕಾರವಳಿದ ಸಂಗವಳಿದ ನಿಸ್ಸಂಗವಳಿದ, ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಳಿಕ ಏನೂ ಎನಲಿಲ್ಲದ ಮೂರ್ತಿಯಾದುದು ಎಂದು ಹೇಳಿಹಳು. ಅನಾಚಾರ ನಷ್ಟ ಮಾಡಿದವರುಂಟು, ಆಚಾರ ನಷ್ಟ ಮಾಡಿದವರುಂಟೆ ? ಆಚಾರ, ಅನಾಚಾರ ಸಮವಾದವಂಗೆ ಅನಾಚಾರವೆಷ್ಟು ನಿಕೃ ಷ್ಟವೊ ಆಚಾರ ಅಷ್ಟೆ ಬಂಧನವುಳ್ಳದ್ದು, ಅಪಾಯಕಾರಿಯಾಗಿದೆ, ತಾನು ಅತಿಂದ್ರ, ತನ್ನ ಆಚಾರ, ಅಗೋಚರ ಆಚಾರ, ಒಡಲಳಿದ ಆಚಾರ, ನಾನೆಂಬುದು ಕೆಟ್ಟ ಆಚಾರ, ನೀನೆಂಬುದು ಕೆಟ್ಟ ಆಚಾರ, ಸ್ವಯ ಪರವೆಂಬುದು ಕೆಟ್ಟ ಆಚಾರ. ಇಲ್ಲಿ ಅಹುದಾವುದೋ

ಅಲ್ಲಾವುದೋ ಸಕಾರವಾವುದೋ, ನಿರಾಕಾರವಾವುದೋ ? ಸಂಗವಾವುದೋ ನಿಸ್ಸಂಗವಾವುದೋ ನಿರವಧಿಯಾಗಿಹ ಮನಮೇರೆದಪ್ಪಿದ ನೆಲೆಯುಳ್ಳ ನಿಲುವು, ಅದಾರ ಊಹಿಸುವುದು ಇಂತಪ್ಪ ಅಪ್ರತಿಮನಗಮ್ಯನಾದುದರಿಂದ ಎನಲಿಲ್ಲದ ಮೂರ್ತಿಯೆಂದು ಹೇಳಿಹಳು.

***ಎತ್ತಲಡಗಿದೆಯಯ್ಯ ಗುರುವೆ*** : ನಾಮ ನಿರ್ನಾಮ ಮಾಡಿದ ಗುರುವೆ, ಎತ್ತಲಡಗಿದೆಯಯ್ಯ ಗುರುವೆಂಬ ಪ್ರತಿಭಾವ ಶಿಷ್ಯನೆಂಬ ಪ್ರತಿಭಾವ, ಕಾಣದ ಮಹಾಗಣವು ಎತ್ತಲಡಗಿದೆಯಯ್ಯ, ಲಿಂಗಕ್ಕೆ ಲಿಂಗವಾಗಿಹ ಮಹಾಘನವು ನೀನು ಎತ್ತಲಡಗಿದೆಯಯ್ಯ ಗುರುವೆ ಎಂದು ಹೇಳಿಹಳು.

***ಸುಖ-ದುಃಖವ ನೊಂದು ರೂಪವ ಮಾಡಿದ ಗುರುವೆ ಎತ್ತಲಡಗಿದೆಯಯ್ಯ, ಸಂಗಯ್ಯನ ಗುರುಬಸವ :*** ಒಡಲುಳ್ಳವಂಗೆ ಸುಖವುಂಟು ದುಃಖವುಂಟು, ಅಂಗದ ಹೊಲಬ ನರಿಯದವಂಗೆ ಸುಖವುಂಟು ದುಃಖವುಂಟು, ಸುಖ-ದುಃಖವನೊಂದು ರೂಪ ಮಾಡಿದ ಗುರುಬಸವ, ಅದು ನಿರೂಪವಿಡದ ಮಹಾಘನಕ್ಕೇನೆನ್ನಬೇಕು. ಆಕಾಶಕ್ಕೆ ಅದಾವ ಸಂಗ ? ಅದಾವ ನಿಸ್ಸಂಗ ? ಸಂಗ-ನಿಸ್ಸಂಗ ಕಾಣದ ಘನಕ್ಕೆ ಅದಾವ ಸುಖ ಅದಾವ ದುಃಖ ಹಗಲು ಬಂದಲ್ಲಿ ಸುಖವೆನಲಿಲ್ಲ, ರಾತ್ರಿ ಬಂದಲ್ಲಿ ದುಃಖವೆನಲಿಲ್ಲ. ನಿರವಧಿಯಾಗಿಹ ನಿರೂಪ ಗುರುವಿಂಗೆ ಅನಾತ್ಮ ಭಾವ ತೋರಿ ದುಃಖವೆನಲಿಲ್ಲ. ಆತ್ಮಭಾವ ಕಂಡು ಸುಖವೆನಲಿಲ್ಲ, ತೆರಹಿಲ್ಲದ ಲಿಂಗಭರಿತನೆಂಬುದು ಅರಿದರಿದು ನೋಡಿದ ಮಹಾಂತಂಗೆ ಅಂಗನೆಂಬುದಕ್ಕೂ ತೆರಹಿಲ್ಲ ಲಿಂಗನೆಂಬುದಕ್ಕೂ ತೆರಹಿಲ್ಲ ಭರಿತನೆಂಬುದಕ್ಕೂ ತೆರಹಿಲ್ಲವಾಗಿ, ಶಬ್ದಮುಗ್ಧನಾದುದಕ್ಕೇನೆನ್ನಬೇಕು ? ಸಂಗಯ್ಯನಾಗಿಹ ಗುರುಬಸವ, ಗುರುವಿಂಗೆ ಗುರುವಾಗಿಹ ಗುರುಲಿಂಗವೇ ಸಂಗಯ್ಯನಾಗಿಹ ಗುರುಬಸವ ಎಂದು ಕೊಂಡಾಡಿಹಳು.

# ತನ್ನನು ಅರಿತು ತಾನೇ ತಾನಾಗುವುದು

**ಗಮನ ಸುಖವಡಗಿ, ನಿರ್ಗಮನವಾಯಿತ್ತು ಬಸವಾ**
**ನಿರ್ಗಮನದ ಸುಖ ಸುಯಿದಾನವಾಯಿತ್ತು ಬಸವಾ,**
**ನೋಡುವ ವಸ್ತು ಕೂಡೆ ಬಯಲಾಯಿತ್ತು ಬಸವಾ,**
**ಎನಗಿನ್ನೇತರ ಭಕ್ತಿ ಬಸವಾ,**
**ಎನಗಿನ್ನೇತರ ಮುಕ್ತಿ ಬಸವಾ,**
**ಎನಗಿನ್ನು ಶಬ್ದನಿಶಬ್ಧ ಸೂಚನೆಯಾಯಿತ್ತಯ್ಯ ಬಸವಾ,**
**ಸಂಗಯ್ಯಾ, ಬಸವನ ಗಮನದ ಅರಿವು ಎನಗೆಲ್ಲಿಯದು.**

**ತಾತ್ಪರ್ಯ** : ***ಗಮನ ಸುಖವಡಗಿ, ನಿರ್ಗಮನವಾಯಿತ್ತು ಬಸವಾ*** : ಗಮನಸುಖವಡಗಲು ತೋರಬಾರದ ಘನದಿರುವಿನ ಜಾಗೃತವಾಗಬೇಕು. ತೋರಬಾರದ ಘನದಿರುವ ತನ್ನಯ ಇರುವಾಗಬೇಕು. ತಾನಾಗಬೇಕು, ನಿಜವೇ ತಾನಾಗಿ ತಾನೆ ನಿಜವಾಗಿ ಸಟೆಯ ಕಾಣದಂತಾದಾಗ ಗಮನಸುಖ ವಡಗುವುದು.

"ಅಯ್ಯ ತನ್ನ ತಾನರಿದು, ತನ್ನ ಅಜ್ಞಾನ ಆಶಾಪಾಶ ಅನಾಚಾರ ಅಸತ್ಯ ನಡೆನುಡಿಗಳ ತಾನರಿದು ತನ್ನ ದುರ್ಗುಣಗಳ ನೀಗಿ ನಿಜದಲ್ಲಿ ನಿಂದಡೆ ತಾನೆ ಮಾಯಾತೀತ, ತಾನೆ

ಗುಣಾತೀತ, ತಾನೆ ಸಗುಣ, ನಿರ್ಗುಣಕಾಧಾರ ಮೂರ್ತಿ, ತಾನೆ ಸಾಕಾರ ನಿರಾಕಾರಕ್ಕೆ ಚೈತನ್ಯ ಮೂರ್ತಿ ನಿಜವಸ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ."

ತನ್ನ ತಾನರಿಯದ ವಿನಃ ಗಮನಸುಖವಡಗದು. ಅಸಾಧ್ಯವಾದುದರಿಂದ ಮೊದಲು ತಾನಾರೆಂದು ತನ್ನ ಅರಿಯುವಡೆ ಆಗ ಅಜ್ಞಾನ ಆಶಾಪಾಶ ಅನಾಚಾರ ಅಸತ್ಯ ನಡೆನುಡಿಗಳ ತಾ ತಿಳಿಯಲು ಬರುವುದು. ಆಗ ತನ್ನ ಸ್ವರೂಪದ ಹಿರಿಮೆ ವಿಧಿತವಾಗಿ ತಾನಾಗದ ತನ್ನದಾಗದ ದೇಹ, ದೇಹ ಧರ್ಮಂಗಳು ತಾನಾಗಿರುವೆನೆಂಬುದು ಅಜ್ಞಾನ, ತನ್ನ ತಾನರಿಯದಿರುವುದೇ ಅಜ್ಞಾನ. ತನಗಿಂತನ್ಯವಾಗಿ ತೋರುವ ಮಾಯಿಕ ಸುಖವ ನಿಜವೆಂದು ನಂಬಿ ಅವುಗಳ ಆಶೆ ಮಾಡುವುಡೆ ಆಶೆಯ ಪಾಶವಾಗಿ ಇಂದ್ರಿಯ ವಿಷಯ ಜನ್ಯ ಸಂಯೋಗ ಸುಖಕ್ಕೆ ಬೆನ್ನು ಹತ್ತಿರುವುದೇ ಅನಾಚಾರ, ನಾಮರೂಪವೆಲ್ಲ ಅಸತ್ಯವೆಂದು ದೇಹ ಇಂದ್ರಿಯಂಗಳ ಶುಭಾಶುಭ ನಡೆ ನುಡಿಗಳು ತಾನಲ್ಲವೆಂದರಿದು ಅವುಗಳೆಲ್ಲ ಅಭಿಮಾನ ರಾಗದ್ವೇಷ ನಷ್ಟವಾದರೆ ದುರ್ಗುಣ ನೀಗಿದಂತೆ ಎಂದು ತಿಳಿಯುವುದು. ಆಗ ಮನವು ಪರಿಶುದ್ಧವಾಗಿ ನಿಜದಲ್ಲಿ ನಿಲ್ಲಲು, ತಾನೆ ಮಾಯಾತೀತ, ತಾನೆ ಗುಣಾತೀತ, ತಾನೆ ಸಗುಣ ನಿರ್ಗುಣ ನಿರ್ಗುಣಕ್ಕಾಧಾರ ಮೂರ್ತಿ. ತಾನೆ ಸಾಕಾರ ನಿರಾಕಾರಕ್ಕೆ ಚೈತನ್ಯ ಮೂರ್ತಿ ನಿಜವಸ್ತುವೆಂದರಿದು ನಿರ್ಗಮನವಾಯಿತ್ತು.

***ನಿರ್ಗಮನದ ಸುಖ ಸುಯಿದಾನವಾಯಿತ್ತು ಬಸವಾ :***

ಅಯ್ಯ, ನಿರ್ಗಮನದ ಸುಖವದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಅದು. ತನ್ನದಾದ ಸುಖ ಅದುವೆ ತನ್ನ ನಿಜದ ಬೆಳಗು ಆ "ಬೆಳಗಿನ ಮುಂಭಾಗದಲ್ಲಿ ಅನಂತ ಕೋಟಿ ಬ್ರಹ್ಮರುತ್ಪತ್ತಿ, ಸ್ಥಿತಿ ಲಯ ನೋಡಾ ಅಯ್ಯ, ತನ್ನ ಬೆಳಗಿನ ಪ್ರಕಾಶದಲ್ಲಿ ಅನಂತ ಕೋಟಿ ಇಂದ್ರಾದಿಗಳುತ್ಪತ್ತಿ ಸ್ಥಿತಿ ಲಯ ನೋಡಾ ಅಯ್ಯಾ, ಬೆಳಗಿನ ಕೊನೆಯಲ್ಲಿ ಅನಂತ ದೇವರ್ಕಳುತ್ಪತ್ತಿ ಸ್ಥಿತಿ ಲಯ ನೋಡಾ. ಇವೆಲ್ಲ ತೋರಿ ಇಲ್ಲವಾಗುವ ಮಾಯಿಕದ ತುಣುಕಾಯಿತ್ತು. ಈ ಚಿದ್ಬೆಳಗೆಂಬ ಅಖಂಡವರಿಯುವಡೆ ತಾನೆ ಅಗಮ್ಯ ಅಗೋಚರ ಅಪ್ರಮಾಣ ಕೂಡಲ ಸಂಗಮದೇವಾ." ತನ್ನಿರುವಿನ ಅರುವೆ ನಿರ್ಗಮನ ಸುಖ ಎಚ್ಚರವಾಯಿತ್ತು ಬಸವಾ ಎಂದು ಹೇಳಿಹಳು.

ತಾನಾರೆಂದರಿದು ತನ್ನಿರವು ಸ್ವಯವಾಗಿ ನಿರ್ಗಮನವಾದ ರಹಸ್ಯವ ನೋಡಿರೆ ! ತನ್ನ ನಿಜದ ಬೆಳಗಿನ ದಿವ್ಯ ದೃಷ್ಟಿಗೆ ಅನಂತಕೋಟಿ ಬ್ರಹ್ಮರುತ್ಪತ್ತಿಯಾಗಲಿ, ಸ್ಥಿತಿಯಾಗಲಿ, ಲಯವಾಗಲಿ, ತುಣುಕಾಯಿತ್ತು, ಖಂಡವಾಯಿತ್ತು. ತನ್ನ ಬೆಳಗಿನ ಅಖಂಡದ ಮುಂದೆ ಇಂದ್ರಾದಿ ದೇವತೆಗಳುತ್ಪತ್ತಿ ಸ್ಥಿತಿ, ಲಯ ತೋರಿ ಇಲ್ಲವಾಗುವ ಮಾಯಿಕದ ತುಣುಕಾಯಿತ್ತು. ಇಂತಪ್ಪ ದೇವರ್ಕಳುತ್ಪತ್ತಿ ಸ್ಥಿತಿ, ಲಯ ತೋರಿ ಇಲ್ಲವಾಗುವ ಮಾಯಿಕದ ತುಣುಕಾಯಿತ್ತು. ಈ ಚಿದ್ಬೆಳಗೆಂಬ ಅಖಂಡವರಿವುಡೆ ತಾನೆ ಅಗಮ್ಯ, ಅಗೋಚರ, ಅಪ್ರಮಾಣವು, ತನ್ನಿರುವಿನ ಅರುವೆ ನಿರ್ಗಮನ ಸುಖ, ಎಚ್ಚರವಾಯಿತ್ತು ಬಸವಾ.

***ನೋಡುವ ವಸ್ತು ಕೂಡೆ ಬಯಲಾಯಿತ್ತು ಬಸವಾ :***

ನೋಡುವ ವಸ್ತು ಆವುದು ? ನೋಡುವ ವಸ್ತು ತಾನೆ. ತನ್ನ ಅರಿತು ತಾನೆ ತಾನಾಗುವುದು. "ನೋಡುವುದು ನೋಡಲರಿಯದೆ ಕೆಟ್ಟಿತೀಜಗವೆಲ್ಲ ನೋಡುವುದು ನೋಡುವುಡೆ ಕೂಡಲಿಲ್ಲ, ಅಗಲಲಿಲ್ಲ ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿ" ತನ್ನನ್ನು ತನ್ನಿಂದ

ತಾನು ನೋಡದದ್ದರಿಂದ ಕೂಡುವ ಅಗಲುವ ಧಾವತಿಯುಳ್ಳದ್ದಾಗಿ ತನ್ನ ನಿರಂತರ ಸುಖದಿಂದ ವಂಚಕವಾಗಿ ಕೆಟ್ಟಿಹುದು. ಶರಣನು ಮಾತ್ರ ತನ್ನನ್ನು ತನ್ನಿಂದ ನೋಡಿ ನೋಡದ ನೋಟ ವಾಗಿ ಕೂಡದ ಕೂಟವಾಗಿ ನೆನೆಯದ ಮನವಾಗಿ ಅರಿಯದ ಅರುವಾಗಿ ಅರಿಯಲಿಲ್ಲದ ಅರುವೆ ತಾನಾದುದು ಬಸವಾ ಎಂದು ಹೇಳಿಹಳು.

***ಎನಗಿನ್ನೇತರ ಭಕ್ತಿ ಬಸವಾ, ಎನಗಿನ್ನೇತರ ಮುಕ್ತಿ ಬಸವಾ*** : ಅರಿಯಲಿಲ್ಲದ ಅರುವೆ ತನ್ನಿರವು ಆಗಿರುವಲ್ಲಿ ಎನಗಿನ್ನೇತರ ಭಕ್ತಿ ಬಸವಾ, ಚಿದ್ಘನ ? ಇದು ಅಹಮ್ಮಿಲ್ಲದ ಚಿದ್ಘನ. ಜ್ಞಾನ ಜ್ಯೋತಿ ಉದಯಾಸ್ತಗಳಿಲ್ಲದ ನಿರಂತರ ಮಂಗಲಮಯ ಜ್ಯೋತಿ ತಾನೆಂದರಿ ದಿರುವದರಿಂದ ಗುರುಲಿಂಗ ತಾನೆ, ಸ್ವಯಲಿಂಗ ತಾನೆ ನಿರ್ನಾಮ ಶಬ್ದಮುಗ್ಧ ತಾನೆ ಆಗಿರು ವಲ್ಲಿ ಎನಗಿನ್ನೇತರ ಮುಕ್ತಿ ಬಸವಾ ಎಂದು ಹೇಳಿಹಳು.

***ಎನಗಿನ್ನು ಶಬ್ದ ನಿಶ್ಯಬ್ಧ ಸೂಚನೆಯಾಯಿತ್ತು ಬಸವಾ*** : ಅರಿಯಲಿಲ್ಲದ ಅರುವೆಂಬ ಶಬ್ದ ಎನಗಿನ್ನು ನಿಶ್ಯಬ್ದ ಸೂಚನೆಯಾಯಿತ್ತು. ಅರಿಯಬಾರದ ಘನವೆಂಬ ಶಬ್ದ ನಿಶ್ಯಬ್ದ ಸೂಚ ನೆಯಾಯಿತ್ತು. ಸಮ ಸ್ವರೂಪವೆಂಬ ಶಬ್ದ ಎನಗಿನ್ನು ನಿಶ್ಯಬ್ಧ ಸೂಚನೆಯಾಯಿತ್ತು. ಎರಡಿ ಲ್ಲದ ವಸ್ತುವೆಂಬ ಶಬ್ದ ಎನಗಿನ್ನು ನಿಶ್ಯಬ್ಧ ಸೂಚನೆಯಾಯಿತ್ತು.

***ಸಂಗಯ್ಯನ ಬಸವ ಗಮನದ ಅರಿವು ಎನಗೆಲ್ಲಿಯದು*** : ಸಂಗಯ್ಯ ನಿಮ್ಮ ಸಂಗದ ಕೂಟಕ್ಕೆ ತೆರಹಿಲ್ಲದ ಕಾರಣ ಬಸವನೆಂಬುದಕ್ಕೂ ತೆರಹಿಲ್ಲ. ಬಸವನ ಭೋದಕ್ಕೂ ತೆರಹಿಲ್ಲದ ಕಾರಣ ಅಖಂಡಿತನ ನಿಲುವಾಗಿಹ ನನ್ನ ನೆಲೆಯಿಲ್ಲದ ನಿಲುವಿನಲ್ಲಿ ಬಸವನ ಗಮನ ಅರಿವು ಎನಗೆಲ್ಲಿಯದು ಎಂದು ಹೇಳಿಹಳು.

# ತ್ರಿವಿದವನರಿಯದ , ಬಯಲಾದ ಬಸವ

**ತ್ರಿವಿಧದ ಮಾಟವಿಲ್ಲವೆನಗೆ ಬಸವಾ,**
**(ತ್ರಿವಿಧದ ಕ್ರಿಯಿಲ್ಲವೆನಗೆ ಬಸವಾ,**
**ತ್ರಿವಿಧದ ಹಂಗಿಗನಲ್ಲ)**
**ತ್ರಿವಿಧದ ಪ್ರಸಾದವಿಲ್ಲವೆನಗೆ ಬಸವಾ**
**ತ್ರಿವಿಧದ ಕುರುಹಿಲ್ಲವೆನಗೆ ಬಸವಾ,**
**ತ್ರಿವಿಧದ ಗೊತ್ತಿಲ್ಲವೆನಗೆ ಬಸವಾ,**
**ಸಂಗಯ್ಯನಲ್ಲಿ ಬಸವ ಬಯಲಾದ ಬಳಿಕ.**

**ತಾತ್ಪರ್ಯ** : ***ತ್ರಿವಿಧದ ಮಾಟವಿಲ್ಲವೆನಗೆ ಬಸವಾ*** : ಮೂರರ ಮಾಟವಿಲ್ಲ. ಮಾತೆಯ ಮಾಟವಿಲ್ಲ, ಪಿತನ ಮಾಟವಿಲ್ಲ, ಅಂದರೆ ಆಣವ ಮಲದ ಮಾಟವಿಲ್ಲ, ಮಾಯಾ ಮಲದ ಮಾಟವಿಲ್ಲ, ಕಾರ್ಮಿಕ ಮಲದ ಮಾಟವಿಲ್ಲವೆನಗೆ ಬಸವಾ. ಇವುಗಳ ಮಾಟವಿ ಲ್ಲಾಗಿ ಎನಗೆ ಗುಣತ್ರಯಗಳ ಮಾಟವಿಲ್ಲವೆನಗೆ, ಮೂರು ಅವಸ್ಥೆಗಳ ಮಾಟವಿಲ್ಲವೆನಗೆ, ತ್ರಿವಿಧ ತಾಪತ್ರಯದ ಮಾಟವಿಲ್ಲವೆನಗೆ, ಭಾವತ್ರಯಂಗಳ ಮಾಟವಿಲ್ಲವೆನಗೆ, ಮೂರು ಕಲ್ಪಿ ತರ ಮಾಟವಿಲ್ಲವೆನಗೆ, ಏಕೆಂದರೆ ಈ ತ್ರಿವಿಧಂಗಳು, ಆದುದನರಿಯೆ ಹೋದುದನರಿಯೆ, ಬಂದುದನರಿಯೆ, ನಿಂದುದನರಿಯೆ, ಒಳಗನರಿಯೆ, ಹೊರಗನರಿಯೆ, ಭಾವವನರಿಯೆ,

ನಿರ್ಭಾವವನರಿಯೆ, ಶೂನ್ಯವನರಿಯೆ, ನಿಶೂನ್ಯವನರಿಯೆ, ಕೂಡಲಸಂಗಮದೇವಾ ನಾನೊಂದೂ ಅರಿಯೆನಯ್ಯ.

ತ್ರಿವಿಧಂಗಳು ಆವೆ ಇರಲಿ, ಮಲಗಳೆ ಇರಲಿ, ಪ್ರಕೃತಿ ಇರಲಿ, ಗುಣಂಗಳೆ ಇರಲಿ, ಇವುಗಳು ಆದುದನರಿಯೆ, ಹೋದುದನರಿಯೆ, ಬಂದುದನರಿಯೆ, ನಿಂದುದನರಿಯೆ, ಒಳಗನರಿಯೆ, ಹೊರಗನರಿಯೆ, ಜೀವನರಿಯೆ, ಅಂತರಾತ್ಮನರಿಯೆ, ಪರಮಾತ್ಮನರಿಯೆ, ಇವುಗಳ ಭಾವಂಗಳನರಿಯೆ, ನಿರ್ಭಾವನರಿಯೆ, ಶೂನ್ಯವನರಿಯೆ, ನಿಶೂನ್ಯವನರಿಯದ್ದರಿಂದ ತ್ರಿವಿಧದ ಮಾಟವಿಲ್ಲವೆನಗೆ ಎಂದು ಹೇಳಿಹಳು.

ತ್ರಿವಿಧದ ಕ್ರಿಯೆ ಇಲ್ಲ ಬೋದ, ಅಬೋಧ, ಬೋಧಾ ಬೋಧ ಮಿಶ್ರಕೂಟವೂ ಇಲ್ಲ ಇವುಗಳ ಕ್ರಿಯೆಯು ಇಲ್ಲ. ಇಲ್ಲವಾದ್ದರಿಂದ ನಿರಂತರವಾಗಿರುವ ನನ್ನಿರವು ಘನಕ್ಕೆ ಘನವಾಗಿ ನನಗೆ ತ್ರಿವಿಧದ ಮಾಟವಿಲ್ಲ, ಇತ್ತ ಗುರುವಿನ ಮಾಟವಿಲ್ಲ, ಕ್ರಿಯೆಯಿಲ್ಲ, ಲಿಂಗ ಕ್ರಿಯೆ ಇಲ್ಲ, ಜಂಗಮ ಕ್ರಿಯೆ ಇಲ್ಲ, ಕಲ್ಪಿತನಾದವಂಗೆ ಮಾಟವುಂಟು, ಕುರುಹು ಉಂಟು, ಪ್ರಸಾದ ಉಂಟು, ಕಲ್ಪನಾರಹಿತಂಗೆ ತ್ರಿವಿಧದ ಮಾಟವಿಲ್ಲ ಎಂದು ಹೇಳಿಹಳು.

"ಶಿಷ್ಯನ ಮುಖದಿಂದಾದ ಗುರುವಿಂಗೆ ಶಿಷ್ಯನ ಪ್ರಸಾದ, ಶಿಷ್ಯನ ಪ್ರಸಾದ ಗುರುವಿಂಗಲ್ಲದೆ ಗುರುವಿನ ಪ್ರಸಾದ ಶಿಷ್ಯನಿಗಿಲ್ಲ. ಇದು ಕಾರಣ ಗುರುವೆ ಓಗರ, ಓಗರ ಅರ್ಪಿತ, ಪ್ರಸಾದ ಪ್ರಸಾದವೆಂದು ಉಂಡುಂಡು ಸವೆದರಲ್ಲ. ಸುಡು ಸುಡು ಶಬ್ದ ಸೂತಕರ ಕೈಯಲ್ಲಿ ಸ್ಥಾವರ ವಿಧಿ ವಶವಾಯಿತ್ತು ಗುಹೇಶ್ವರಾ."

ಶಿಷ್ಯರ ಮುಖ ಕಂಡು ಗುರುಗಳ ಸಂಖ್ಯೆ ಹೆಚ್ಚಾಗಿದೆ. ಶಿಷ್ಯನೆಂಬ ಪ್ರತಿಭಾವ ನಷ್ಟ ಮಾಡಿದ ಶ್ರೀಗುರು ಸಿಕ್ಕುವುದು ಬಹು ದುಸ್ತರವಾಗಿದೆ. ಇದು ಕಾರಣ ಬಿಟ್ಟು ಮಹೇಶನಾಗಿ ಗುರುವೆನಿಸಿಕೊಂಡವರು. ಹಿಡಿದು ಭಕ್ತರಾದ ಸಂಖ್ಯೆಯು ಹೆಚ್ಚು ಇದೆ. ಇವರುಗಳ ಗುರು ಶಿಷ್ಯತ್ವ ಮನದ ಕಲ್ಪಿತಕ್ಕೆ ಒಪ್ಪಿದುದು. ಇವರಿಗೆ ಕಲ್ಪಿತ ನಿಜವಾದುದರಿಂದ ಶಿಷ್ಯನ ಪ್ರಸಾದ ಗುರುವಿಂಗಲ್ಲದೆ, ಗುರುವಿನ ಪ್ರಸಾದ ಶಿಷ್ಯನಿಗಿಲ್ಲವಾದ್ದರಿಂದ ಇವರು ಶಬ್ದಸೂತಕಿಗಳು. ಶಬ್ದ ನಷ್ಟ ಮಾಡದವರು ನಿಶಬ್ದವೇದದ ರಹಸ್ಯ ತಿಳಿಯದವರು.

ಇವರು ಜಗತ್ಪೂಜ್ಯರೆನಿಸಿಕೊಂಡರೇನು? ಹುಟ್ಟು ಸಾವು ನಷ್ಟ ಮಾಡದವರು. ಜಗತ್ತಿನ ಪ್ರತಿಷ್ಠೆಯ ಕೈಯಲ್ಲಿ ಸಿಕ್ಕವರು. ಇವರ ಬದುಕು ಅಳುಕು. ಹೀಗಾಗಿ ಜಗತ್ತಿನ ಪ್ರತಿಷ್ಠೆ ಉಳಿಸಿಕೊಳ್ಳಲು ಶಬ್ದವೇದಿಗಳಾಗಿ ನಡೆ ನುಡಿಯೆ ಇವರ ಘನದಿರುವಿನ ನಾಂದಿಯಾಗಿರುವಲ್ಲಿ ನಿಶಬ್ಧವೇದಿಗಳಾಗಲು ಸ್ಮೃತಿಯೆ ಇಲ್ಲದಿರುವಲ್ಲಿ ಇವರಿಗೆ ಗುರುತನದಿಂದ ತಮಗೇನು ಪ್ರಯೋಜನ. ಶಿಷ್ಯನಿಗಾದರೂ ತನ್ನ ನಿಜದಿರುವ ತಿಳಿಯದಿದ್ದಲ್ಲಿ ಜಿಜ್ಞಾಸು ವೃಂದಕ್ಕಾದರೂ ಲಾಭವೇನು ?

ನೀಲಮ್ಮ ತಾಯಿಯು, ಗುರುವಿಂಗೆ ಗುರುವಾಗಿ ಗುರುಪ್ರಸಾದ ಕೊಂಡ ಮಹಾ ಶಕ್ತಿ. ಲಿಂಗಕ್ಕೆ ಲಿಂಗವಾಗಿಹ ಲಿಂಗಪ್ರಸಾದ ಕೊಂಡ ಘನ ಶಕ್ತಿ. ಜಂಗಮಕ್ಕೆ ಜಂಗಮವಾಗಿಹ ಜಂಗಮ ಪ್ರಸಾದ ಕೊಂಡ ನಿಜೈಕ್ಯ ಶಕ್ತಿಯಾದುದರಿಂದ ತ್ರಿವಿಧದ ಮಾಟವಿಲ್ಲವೆನಗೆ ಬಸವಾ ಎಂದು ಹೇಳಿಹಳು. ಗುರುವಿಂಗೆ ಗುರುವಾಗಿ ಗುರು ಪ್ರಸಾದಕೊಂಡವರಿಗೆ ಗುರುವೆ ಹೆತ್ತರಿವು ಆಗಿ ತಾನೆ ಸ್ವಯಂಜ್ಯೋತಿಯಾಗಿಹ ತನ್ನ ಅಂತರಂಗದಲ್ಲಿದ್ದ ಗುರು ಲಿಂಗವ ತಿಳಿದವರು.

ಗುರುಲಿಂಗವದು ಸಮಸ್ವರೂಪವಾಗಿಹ ತನ್ನಿರವು ತಾನಾಗಿಹ ಘನಕ್ಕೆ ಘನ ಇದು ನಿತ್ಯನಿರಂಜನವಾಗಿಹ ನಿಜ ಚಿದ್ರೂಪ. ಇದು ನಿರಂತರವಾಗಿಹ ಮಂಗಲಮಯ ಸ್ವಯಂಜ್ಯೋತಿ ಗುರುಲಿಂಗ. ಇದುವೆ ಮನಕ್ಕೆ ಮನವಾಗಿಹ ಸ್ವಯಲಿಂಗ ಕಲ್ಪನಾರಹಿತವಾಗಿಹ ಸ್ವಯಂಜ್ಯೋತಿ. ಇದು ಭಾವಕ್ಕಿಂಬು ಕೊಡದೆ ಭರಿತವಾಗಿಹ ತೆರಹಿಲ್ಲದ ಲಿಂಗ. ಇದುವೆ ಲಿಂಗ ಒಂದಾಗಿರ್ದ ಜಂಗಮ. ಜಂಗಮ ಒಂದಾಗಿರ್ದ ಲಿಂಗವಾದ್ದರಿಂದ ನನಗೆ ಕಲ್ಪಿತ ಗುರುವಿನ ಕ್ರಿಯೆ ಇಲ್ಲ. ಕಲ್ಪಿತ ಪೂಜಾಲಿಂಗದ ಕ್ರಿಯೆ ಇಲ್ಲ. ಕಲ್ಪಿತ ಗಮನಿ ಜಂಗಮದ ಕ್ರಿಯೆ ಇಲ್ಲವಾದ್ದರಿಂದ ತ್ರಿವಿಧದ ಮಾಟವಿಲ್ಲವೆಂದರು.

***ತ್ರಿವಿಧದ ಪ್ರಸಾದವಿಲ್ಲವೆನಗೆ ಬಸವಾ :***

ಈ ಕಲ್ಪಿತಕ್ಕೆ ಒಪ್ಪಿದ ಗುರುವಿನ ಪ್ರಸಾದವು ಇಲ್ಲ, ಪೂಜಾಲಿಂಗದ ಪ್ರಸಾದವಿಲ್ಲ, ಗಮನಿ ಜಂಗಮದ ಪ್ರಸಾದವಿಲ್ಲ, ಏಕೆಂದರೆ ತ್ರಿವಿಧದ ಕುರುಹಿಲ್ಲವೆನಗೆ ಬಸವಾ ಎಂದು ಹೇಳಿಹಳು.

"ಭಕ್ತರಾದೆವೆಂದು ಯುಕ್ತಿಗೆಟ್ಟುನುಡಿವರು. ಭಕ್ತಿಸ್ಥಲವೆಲ್ಲರಿಗೆಲ್ಲಿಯದೊ ? ಗುರುವಿನಲ್ಲಿ ತನುವಂಚನೆ ಲಿಂಗದಲ್ಲಿ ಮನವಂಚನೆ, ಜಂಗಮದಲ್ಲಿ ವಂಚನೆಯುಳ್ಳನ್ನಕ್ಕರ ಭಕ್ತನೆ ? ಗುರುವಿನಲ್ಲಿ ಚಾರಿತ್ರವ, ಲಿಂಗದಲ್ಲಿ ಲಕ್ಷಣವ, ಜಂಗಮದಲ್ಲಿ ಜಾತಿ ಅರಸುವನ್ನಕ್ಕರ ಅವನು ದೋಷಾರ್ಥಿ ಕೂಡಲ ಚೆನ್ನಸಂಗಮದೇವಾ."

***ತ್ರಿವಿಧದ ಕುರುಹಿಲ್ಲವೆನಗೆ ಬಸವಾ :***

ಗುರುವಿನಲ್ಲಿ ತನುವಂಚಕರಾಗಿ ಗುರುವು ಕುರುಹಾಗಿ ಕಂಡನು. ಲಿಂಗದಲ್ಲಿ ಮನ ವಂಚಕವುಳ್ಳದ್ದಾಗಿ ಲಿಂಗವು ಕುರುಹಾಗಿ ತೋರಿತ್ತು. ಜಂಗಮದಲ್ಲಿ ಧನ ವಂಚಿಸಿ ಜಂಗಮ ಜಾತಿಯಾಗಿ ತೋರಿತ್ತು. ಇದು ತಮ್ಮ ತಮ್ಮ ಅಂತರಂಗ ದೋಷವೆ ಕುರುಹಾಗಿ ಕಂಡಿತ್ತು. ಎನಗೆ ತನು, ತನುವಿನ ತನುವಾಗಿ ಗುರುಲಿಂಗವಾಗಿ ಪ್ರಜ್ವಲಿಸಿತ್ತು. ಮನ, ಮನದ ಮನವಾಗಿ ಸ್ವಯಲಿಂಗವಾಗಿ ಪ್ರಜ್ವಲಿಸಿತ್ತು. ಧನ, ಧನದ ಧನವಾಗಿ ನಿರ್ಲಿಖಿತ ಜಂಗಮದ ಇರುವಾಗಿ ಪ್ರಜ್ವಲಿಸಿ ತ್ರಿವಿಧದ ಹಂಗಿಲ್ಲ ಕುರುಹಿಲ್ಲವೆನಗೆ ಬಸವಾ ಎಂದು ಹೇಳಿಹಳು.

***ತ್ರಿವಿಧವು ಗೊತ್ತಿಲ್ಲವೆನಗೆ ಬಸವಾ :***

ಅರಿಯಲಿಲ್ಲದ ಅರುವೆ ಸ್ವೀಕರಿಸಿ, ಅರಿವ ಅರುಹಿಸಿಕೊಂಬ ಈ ಉಭಯನಷ್ಟವಾಗಿರುವುದರಿಂದ ಗುರುವೆಂಬ ನಾಮರೂಪ ನಿರ್ನಾಮವಾದುದರಿಂದ ಗುರುವೆಂಬುದು ಗೊತ್ತಿಲ್ಲವೆನಗೆ, ಶಿಷ್ಯನೆಂಬುದು ಗೊತ್ತಿಲ್ಲವೆನಗೆ, ಲಿಂಗವೆಂಬ ನಾಮವು ಗೊತ್ತಿಲ್ಲ ಕುರುಹು ಗೊತ್ತಿಲ್ಲ, ಜಂಗಮವೆಂಬ ನಾಮವು ಗೊತ್ತಿಲ್ಲ, ಜಾತಿಯು ಗೊತ್ತಿಲ್ಲವೆನಗೆ, ಇವರ ಅರಿವು ಗೊತ್ತಿಲ್ಲವೆನಗೆ ಎಂದು ಹೇಳಿಹಳು.

***ಸಂಗಯ್ಯನಲ್ಲಿ ಬಸವ ಬಯಲಾದ ಬಳಿಕ :***

ತೆರಹಿಲ್ಲದಭವ ನುಡಿಗೆಡೆಗೊಡದ ಘನನಾಗಿಹ ಸಂಗಯ್ಯನಲ್ಲಿ ಬಸವ ಕಾಣದ್ದರಿಂದ ತ್ರಿವಿಧದ ಮಾಟವಿಲ್ಲವೆಂದು ಹೇಳಿಹಳು.

# ಉಪದೇಶ ನಷ್ಟವಾಗಿ ಗುರುವೆಂದೆನಯ್ಯ

**ನಮಗಾರ ಸಂಗವಿಲ್ಲ, ನಮಗಾರ ಸಂಗವಿಲ್ಲ,**
**ನಮಗಾರ ಪರವಶವಿಲ್ಲ, ನಮಗಾರ ಇರಪರವಿಲ್ಲ,**
**ನಮಗಾರ ಪರವಿಲ್ಲ, ನಮಗೆ ಹೃದಯದ ಹಂಗಿಲ್ಲವಯ್ಯ,**
**ನಮಗೆ ನಿಮ್ಮ ಹಂಗಿಲ್ಲ, ಸಂಗಯ್ಯನಲ್ಲಿ ಬಸವ ಸ್ವಯಲಿಂಗಿಯಾದ ಬಳಿಕ.**

**ತಾತ್ಪರ್ಯ** : ***ನಮಗಾರ ಸಂಗವಿಲ್ಲ, ನಮಗಾರ ಸಂಗವಿಲ್ಲ*** : ಇವರಾರು ? ನಮಗಾರ ಸಂಗವಿಲ್ಲವೆಂದು ಹೇಳಿದ ನೀಲಮ್ಮ ತಾಯಿಯ ವಿಷಯ ಬಹು ಗಹನಾರ್ಥವಾಗಿದೆ. "ಮನ ನಷ್ಟವಾದರೆ ಭಕ್ತರೆಂಬೆ, ಉಪದೇಶ ನಷ್ಟವಾದರೆ ಗುರುವೆಂಬೆ, ಭಾವ ನಷ್ಟವಾದರೆ ಲಿಂಗವೆಂಬೆ, ಗಮನ ನಷ್ಟವಾದರೆ ಜಂಗಮರೆಂಬೆ, ಅರ್ಪಿತ ನಷ್ಟವಾದರೆ ಪ್ರಸಾದಿಯೆಂಬೆ, ಆಚಾರ ನಷ್ಟವಾದರೆ ಐಕ್ಯರೆಂಬೆ, ಇಂತೀ ಷಡಸ್ಥಲದಲ್ಲಿ ನಿಂದ ನಿಲುವಿನ ಪರಿಣಾಮ ಪದವ ಕೂಡಲ ಚೆನ್ನ ಸಂಗಾ ನಿಮ್ಮ ಶರಣರೆ ಬಲ್ಲರು."

ನಮಗೆ ಮನನಷ್ಟ ಮಾಡಿ ಭಕ್ತರಾದವರ ಸಂಗವೂ ಇಲ್ಲ. ಉಪದೇಶ ನಷ್ಟ ಮಾಡಿ ಗುರುವಾದವರ ಸಂಗವೂ ಇಲ್ಲ. ಭಾವ ನಷ್ಟ ಮಾಡಿ ಲಿಂಗವಾದವರ ಸಂಗವೂ ಇಲ್ಲ. ಗಮನ ನಷ್ಟ ಮಾಡಿ ಜಂಗಮವಾದವರ ಸಂಗವೂ ಇಲ್ಲ. ಅರ್ಪಿತ ನಷ್ಟ ಮಾಡಿ ಪ್ರಸಾದಿಗಳಾದವರ ಸಂಗವೂ ಇಲ್ಲ. ಆಚಾರ ನಷ್ಟ ಮಾಡಿ ಐಕ್ಯರೆನಿಸಿಕೊಂಬುವರ ಸಂಗವೂ ಇಲ್ಲ. ನಮಗೆ ಇವರಾರ ಸಂಗವಿಲ್ಲ. ಏಕೆಂದರೆ "ಬೆಳಗಿನ ಪ್ರಭೆ ಥಳ ಥಳಿಸಿ ಹೊಳೆಯಲು ಆ ಬೆಳಗಿನೊಳಗೆ ಬೆಳೆದ ಶಿಶುವಾನಯ್ಯ, ಕಳೆಯರಿಯದೆ ಬೆಳೆದೆನು. ತಿಳುಹಿಲ್ಲದೆ ನಿಂದೆನು. ಸಂಗಯ್ಯನಲ್ಲಿ ಬಸವಾ ಎನುತಿರ್ದೆನು."

ಬಸವಾ ಬಸವಾ ಆರು ಗೊತ್ತೆ ? ಏಕ ಏವ ದೇವನೊಬ್ಬನೆ ಇರುವಾಗಿಹ ಬೆಳಗಿನ ಪ್ರಭೆ. ಥಳ ಥಳಿಸಿ ಹೊಳೆಯಲು ಆ ಬೆಳಗಿನೊಳಗೆ ಬೆಳೆದ ಶಿಶುವಾನಯ್ಯ. ಷಟಸ್ಥಲದ ಕಳೆಯನರಿಯದೆ ಬೆಳೆದೆನು. ಅರಿಯಬಾರದ ಘನವರಿತು ತಿಳುಹಿಲ್ಲದೆ ನಿಂದೆನು. ಮಹಾಘನವಾಗಿಹ ಮದ್ದುಗ್ಗರು, ಮಹದಾನಂದದ ಲಕ್ಕಾಡಿದುದು ಕಂಡು ತಿಳುಹಿಲ್ಲದೆ ನಿಂದೆನು.

ಮಹದಾನಂದದ ಲಕ್ಕಾಡಿದ ಆಟ ಮಾತಿಲ್ಲದ ಆಟ. ಪರಮಾನಂದದ ಆಟ. ಪರಮಾಮೃತದ ಆಟ. ಅದು ತೆರಹಿಲ್ಲದ ಘನದ ಆಟ. ಈ ಘನದಾಟಕ್ಕೆ ನುಡಿದ ನುಡಿಯ ನಡೆಯನು, ನಡೆದ ನಡೆಯ ನುಡಿಯನು. ಇಂತಪ್ಪ ನುಡಿ ನಷ್ಟಮಾಡಿ ನಡೆದ ನಡೆ, ನಡೆ ನಷ್ಟಮಾಡಿ ಶಬ್ದಮುಗ್ಧನಾಗಿಹ ಮುಗ್ಧಾನುಭವಿ, ನಿಶಬ್ದವೇದಿಯ ಶಬ್ದಕ್ಕೆ ತರಬಾರದು.

***ನಮಗಾರ ಪರವಶವಿಲ್ಲ :***

ಗುರುಶಿಷ್ಯರ ಮಧ್ಯದಲ್ಲಿದ್ದ ವಸ್ತುವರಿತ ಸ್ವಯಂಜ್ಯೋತಿ ಬಸವಯ್ಯನ ಗುರುವಾಗಿ ಕಾಣಬಾರದು, ಶಿಷ್ಯನಾಗಿ ಕಾಣಬಾರದು, ಭಕ್ತನಾಗಿ ಕಾಣಬಾರದು, ಜಂಗಮನಾಗಿ ಕಾಣಬಾರದು, ಅದು ಇಬ್ಬರ ಮಧ್ಯದಲ್ಲಿದ್ದ ವಸ್ತು. ಗುರುಲಿಂಗ ಅಂತಪ್ಪ ಬೆಳಗಿನೊಳಗೆ ಬೆಳೆದ ಶಿಶುವಾನಯ್ಯ, ಶಿಶು ಅದಾರ ವಶವಾಗಬೇಕು. ಇದು ಕಾರಣ ನಮಗಾರ ಪರವಶವಿಲ್ಲ ಎಂದು ಹೇಳಿಹಳು.

***ನಮಗಾರ ಇಹಪರವಿಲ್ಲ*** :

ನಮಗಾರ ಇಹವಿಲ್ಲ, ನಮಗಾರ ಪರವಿಲ್ಲ, ನಮಗಾರ ಬಂಧವಿಲ್ಲ, ನಮಗೆ ಆವ ಮೋಕ್ಷವು ಇಲ್ಲ. ಎರಡಿಲ್ಲದ ವಸ್ತುವೆ ನೀನೆರಡು ಮಾಡಿದೆಯಲ್ಲ, ಎರಡನೇಕೀಕರಿಸಿ ಭ್ರಮೆಯ ಬಿಡಿಸಿದೆಯಲ್ಲ. ಓ ಬಸವರಸ ಎರಡಿಲ್ಲದ ವಸ್ತುವ ತೋರಿಸಿದಾಗ ನನಗಾವ ಇಹ, ನನಗಾವ ಪರ, ನನಗಾವ ಬಂಧ, ನನಗಾವ ಮೋಕ್ಷ, ಎರಡಾದುದು ಎರಡಿಲ್ಲದ ವಸ್ತುವೆಂದು ಏಕೀಕರಿಸಿ ಭ್ರಮೆಯ ಬಿಡಿಸಿದ ಮೇಲೆ ಇನ್ನೇನು ?

***ನಮಗಾರ ಪರವಿಲ್ಲ*** :

ಎರಡಿಲ್ಲದ ವಸ್ತುವರಿತ ಬಳಿಕ ನಮಗಿಂತ ಹೆಚ್ಚಿನದೂ ಇಲ್ಲ. ನಮಗಿಂತ ಅನ್ಯವಾದುದು ಇಲ್ಲ. ನಮಗೆ ಶರಣಸತಿ, ಲಿಂಗ ಪತಿ ಎಂಬುದು ತೆರಹಿಲ್ಲದ ಘನವೆಂದು ಅರುಹಿದ ಬಳಿಕ ನಮಗಾರ ಪರವಿಲ್ಲವೆಂದು ಹೇಳಿಹಳು.

***ನಮಗೆ ಹೃದಯದ ಹಂಗಿಲ್ಲವಯ್ಯ*** :

ನಮಗೆ ನಮ್ಮ ಅಂತರಾಳದ ಹಂಗಿಲ್ಲ. ನಮ್ಮ ಮನಸ್ಸಿನ ಹಂಗಿಲ್ಲ. ಮನದ ತಿಳಿಯುವ ತಿರುಳಿನ ಅರುವಿನ ಹಂಗಿಲ್ಲ. ನಮಗೆ ನಿಮ್ಮ ಹಂಗಿಲ್ಲವಯ್ಯ. ನಮಗೆ ಅಷ್ಟಾವರ್ಣ ಪಂಚಾಚಾರ, ಷಡಸ್ಥಲದವರಾಗಿಹ ನಿಮ್ಮ ಹಂಗಿಲ್ಲವಯ್ಯ. ನೀವು ಸಮಯಚಾರದವರಾದಲ್ಲಿ ನಿಮ್ಮ ಹಂಗಿಲ್ಲವಯ್ಯ.

***ನಮಗೆ ನಿಮ್ಮ ಹಂಗಿಲ್ಲವಯ್ಯ*** : ನಮಗೆ ಅಷ್ಟಾವರಣ, ಪಂಚಾಚಾರ, ಷಡಸ್ಥಲದವರಾಗಿಹ ನಿಮ್ಮ ಹಂಗಿಲ್ಲವಯ್ಯ. ಮಹವು ಆಗಿ, ಮಹದಾನಂದದಲಕ್ಕಾಡಿದವರು, ಮತ್ತಲ್ಲಿಯೆ ಲೀಯವಾಗಿರ್ದವರು. ಇದು ಕಾರಣ ನಮಗೆ ನಿಮ್ಮ ಹಂಗಿಲ್ಲವಯ್ಯ ಎಂದು ಹೇಳಿಹಳು.

***ಸಂಗಯ್ಯನಲ್ಲಿ ಬಸವ ಸ್ವಯಲಿಂಗಿಯಾದ ಬಳಿಕ*** :

ಸಂಗಯ್ಯನಲ್ಲಿ ಬಸವಸ್ವಯಲಿಂಗವಾದುದನೇನೆಂಬೆ, ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯ ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ. ಘನಗಂಭೀರ ಮಹಾಘನವದು ಅದು ಅರಿಯಬಾರದ ಘನ ಅದು ಅರಿಯಲಿಲ್ಲದ ಅರುವು. ಅಂತಪ್ಪ "ಅರಿಯಲಿಲ್ಲದ ಅರುವ ನರುಹಿಸಿದ ಗುರುವನರಿಯಲುಂಟೆ ? ಇಂತಪ್ಪ ಅರಿಯಲಿಲ್ಲದ ಅರುವ ಅವಗ್ರಹಿಸಿ ಅರಿಯಲಿಲ್ಲ ಮರೆಯಲಿಲ್ಲ ನಿಜವು ನಿಂದಿತ್ತಾಗಿ ನಿಷ್ಪತ್ತಿಯಾಯಿತ್ತು ನಿರ್ನಾಮವಾಯಿತ್ತು ಅಗಮ್ಯದಲ್ಲಿ ಗಮನಗೆಟ್ಟಿತ್ತು ನಿಂದಲ್ಲಿ ನಿರಾಳವಾಯಿತ್ತು ಕೂಡಲ ಸಂಗಮದೇವರಲ್ಲಿ ಶಬ್ದಮುಗ್ಧವಾಯಿತ್ತು".

ಶಬ್ದಮುಗ್ಧವಾದ ಮಹದರುವೆ ಸ್ವಯಲಿಂಗವಾಗಿ ನಿಜದಲ್ಲಿ ನಿಂದ ಚಿನ್ನ, ಆವಾವುದು ಆದುದನರಿಯೆ ಹೋದುದನರಿಯೆ ಬಂದುದನರಿಯೆ ನಿಂದುದನರಿಯೆ ಒಳಗನರಿಯೆ ಹೊರಗನರಿಯೆ ಭಾವವನರಿಯೆ ನಿರ್ಭಾವವನರಿಯೆ ಶೂನ್ಯವನರಿಯೆ ನಿಶೂನ್ಯವನರಿಯೆ. ಇವಾವು ಅರಿಯಲಿಲ್ಲವಾದ್ದರಿಂದ ಘನಕ್ಕೆ ಘನನಾಗಿಹ ನನ್ನ ಮರೆಯಲಿಲ್ಲ. ನಿರ್ನಾಮವಾಗಿಹ ನನ್ನಿರುವ ಮರೆಯಲಿಲ್ಲ. ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಳಿಕ ನಿಜದಲ್ಲಿ ನಿಂದುದು ಮರೆಯಲಿಲ್ಲ. ಪರಮ ಶಾಂತಿಯೆ ನನ್ನಿರುವಾಗಿ ಶಬ್ದಮುಗ್ಧವಾಯಿತ್ತು.

# ನುಡಿಯಲಿಲ್ಲದ ಮಾತು

**ಮಾತಿಲ್ಲವೆನಗೆ ಆ ಮಾತು ನುಡಿಯಲಿಲ್ಲವೆನಗೆ,**
**ನೇಮವಳಿದು ಸೀಮೆಯ ಕಳೆದು ಉಭಯ ತನು ನಷ್ಟವಾಗಿ**
**ಬಣ್ಣದ ಭ್ರಮೆಯಳಿದು ಮೂರ್ತಿಯ ಕುರುಹ ನಷ್ಟವ**
**ಮಾಡಿ ಸಂಗಯ್ಯನಲ್ಲಿ ಬಸವ ಭಾವವಿಲ್ಲದೆ ಬಯಲಾದೆನು.**

**ತಾತ್ಪರ್ಯ : ಮಾತಿಲ್ಲವೆನಗೆ ಆ ಮಾತು ನುಡಿಯಲಿಲ್ಲವೆನಗೆ :** ಮಾತಿಲ್ಲ ? ಆರಿಗೆ ಮಾತಿಲ್ಲ ? ಮಾತಿಲ್ಲವೆಂದು ಆರು ನುಡಿವರೋ ಅವನೆ ಮಾತಿಲ್ಲದವನು. ತಾನು ಮಾತಿಲ್ಲದವನಾದು ದರಿಂದ ಮಾತಿಲ್ಲವೆನಗೆ ಎಂದು ತನ್ನಿರುವ ತಾನೆ ಪ್ರಕಟಪಡಿಸುತ್ತಿಹುದು ಕಂಡು ಅಚ್ಚರಿಯಾಯಿತ್ತು.

ಮಾತಿಲ್ಲವೆನಗೆ ? ಮಾತಿನಿಂದ ಮಾತನಾಡಿ ಆ ಮಾತು ತನ್ನಲ್ಲಿ ನಷ್ಟ ಮಾಡಿ ತೋರಿಸುವ ಕಾರುಣ್ಯಕ್ಕೇನನ್ನಬೇಕು. ನೋಡುವುಡೆ ಮಾತನಾಡಿದಂತೆ ಕಾಣಬರುತ್ತಿದೆ. ಅರಿದರಿದು ನೋಡುವುಡೆ ಮಾತನಾಡದವನ ಸಂಜ್ಞೆ ಎದ್ದು ತೋರುತ್ತಿಹುದು. ಈ ಸಂಜ್ಞೆ ಅರಿಯುವ ಭಾಗ್ಯ ಅದಾರಿಗೆ ? ಹೃದ ಯವಾಗಿ ತನ್ನಿಂದ ತನ್ನ ಕಂಡ ಅರುವಿನ ಪರಿಮಳವಾದವರ ಭಾಗ್ಯವು. ಮಾತಿಲ್ಲವೆನಗೆ ಇವರಾರು ?

ಗುರುಲಿಂಗ ಉದಯವಾದ ಉದಯವಿದು. "ಇಬ್ಬರ ಮಧ್ಯದಲ್ಲಿ ಒಂದು ವಸ್ತು ಉಂಟು ಕಂಡಿರೆ ಗಣಂಗಳಿರಾ ! ಕಂಡಿರೆ ಅಣ್ಣಗಳಿರಾ ! ಗುರುವಿನ ಗುರು ಬೇಗಲರಿಯಿರೆ ಗುಹೇಶ್ವರಾ."

ಗುರುಶಿಷ್ಯರ ಮಧ್ಯದಲ್ಲಿದ್ದ ವಸ್ತುವದು. ಗುರುವಿನ ಗುರು ಕಂಡಿರೆ ಅಣ್ಣಗಳಿರಾ. ಬೇಗ ಅರಿತ ವರೆಂದರೆ ಬಸವಾದಿ ಪ್ರಮಥರು. ಅವರು ಅರಿತುದರಿಂದ ''ಇವನ ಕಂಡು ತಮದಂತಾಯಿತ್ತೆನ್ನ ಗುರು ವಿನುಪದೇಶ. ವಾಯುವಿನ ಕೈಯ ಸೊಡರಿನಂತಾಯಿತ್ತೆನ್ನ ಗುರುವಿನುಪದೇಶ''. ಇದು ಕೂಡಲ ಚೆನ್ನ ಸಂಗಯ್ಯನ ಒಲವಿನ ಉದಯದರ್ಪಣದಿಂದ.

ಗುರುಲಿಂಗದುದಯವಾದ ಉದಯ ನೋಡಿರೆ ? ಹಿಂದೆ ಕತ್ತಲು, ಮುಂದೆ ಬೆಳಗಾಯಿತ್ತು. ಮಾತಿಲ್ಲವೆನಗೆ ಎಂಬ ಸಂಜ್ಞೆ ಆ ಮಾತು ನುಡಿಯಲಿಲ್ಲವೆನಗೆ ಎಂಬುದು ಬೆಳಗು ಬೆಳದಿಂಗಳಾಯಿತ್ತು ಎಂಬ ನುಡಿ, ತನ್ನ ಅಂತರಂಗದಲ್ಲಿ ಗುರುಲಿಂಗದುದಯ ಕಂಡು ತಮದಂತಾಯಿತ್ತೆನ್ನ ಗುರುವಿನುಪ ದೇಶ. ಇದಲ್ಲದೆ ವಾಯುವಿನ ಕೈಯ ಸೊಡರಿನಂತಾಯಿತ್ತೆನ್ನ ಗುರುವಿನುಪದೇಶ ಇದು ಕಾರಣ ಉರಿಯ ಮುಖದೊಳಗಿಪ್ಪ ಕರ್ಪೂರದಂತಾಯಿತ್ತೆನ್ನ ಗುರುವಿನ ಉಪದೇಶ. ಇದು ಒಲುವಿನ ಉದ ಯದ ಕಾರುಣ್ಯದ ಕನ್ನಡಿಯಿಂದ.

ಮಾತಿಲ್ಲವೆನಗೆ, ಆ ಮಾತು ನುಡಿಯಲಿಲ್ಲವೆನಗೆ, ಕಂಡವನು ಹೇಳಿಲ್ಲ, ಹೇಳಿಲ್ಲದವನು ಕಂಡಿ ಲ್ಲವೆನ್ನುವಂತೆ ಮಾತಿಲ್ಲವೆನಗೆ ! ಇವನು ಇಬ್ಬರ ಮಧ್ಯೆದಲ್ಲಿದ್ದ ಗುರುವಿನ ಗುರುವ ಅರಿತವನು. ಅರಿತ ವನಾದುದರಿಂದ ಆ ಮಾತು ನುಡಿಯಲಿಲ್ಲವೆನಗೆ ಎಂದು ಹೇಳಿಹಳು.

"ನೋಡಿಹೆನೆಂದರೆ ದೃಷ್ಟಿಕೊಳ್ಳದು, ಪೂಜಿಸಿಹೆನೆಂದರೆ ಪೂಜೆಗೊಳ್ಳದಿನ್ನೆಂತೊ ಅರಿದೆನೆಂದರೆ ಏನೂ ಇಲ್ಲ, ಘನದೃಷ್ಟಿ ಕೂಡಲಚೆನ್ನಸಂಗಾ." ಈ ಉಭಯಗೆಟ್ಟ ಲಿಂಗಾರ್ಚನೆ ನೋಡಿಹೆನೆಂದರೆ ದೃಷ್ಟಿಗೆ ಒಳಪಡದು. "ದೃಷ್ಟಿಗೆ ಒಳಪಡದ್ದರಿಂದ ದೃಷ್ಟಿ ನಷ್ಟ, ದೃಷ್ಟಿ ನಷ್ಟವಾದುದಕ್ಕೇನು ದೃಷ್ಟ ಭಾವ ನಷ್ಟವೆ ದೃಷ್ಟ, ಭಾವ ನಷ್ಟವಾದುದಕ್ಕೇನು ದೃಷ್ಟ, ಅನುಭಾವ ನಷ್ಟವೆ ದೃಷ್ಟ, ಅನುಭಾವ ನಷ್ಟಕ್ಕೇನು ದೃಷ್ಟ, ಸ್ವಯಪರವಾವುದೆಂದರಿಯದುದೆ ದೃಷ್ಟ, ಸ್ವಯಪರವಾವುದೆಂದರಿಯದುದಕ್ಕೇನು ದೃಷ್ಟ ಕೂಡಲ ಚೆನ್ನಸಂಗನೆಂದು ಎನ್ನದಿಹುದೆ ದೃಷ್ಟ"

ಈ ಘನದೃಷ್ಟಿ ಅದಾರಿಗೆ ? ನೋಡಿಹನೆಂದರೆ ದೃಷ್ಟಿನೋಡದು. ಪೂಜಿಸಿಹೆನೆಂದರೆ ಪೂಜ್ಯ ಪೂಜಿಕನೆಂಬ ಪೂಜೆಗೆ ಇಂಬುಗೊಡದು. ಅರಿದೆನೆಂದರೆ ಅರಿಸಿಕೊಂಬುದೂ ಇಲ್ಲ, ಅರಿವುದೂ ಇಲ್ಲ

ಇದು ಉಭಯ ಕೆಟ್ಟ ಲಿಂಗಾರ್ಚನೆ. ಲಿಂಗವು ಮಾತಿಲ್ಲದುದು ಲಿಂಗವು ನೋಡ ಹೋದ ನನಗೂ ಮಾತಿಲ್ಲದುದು. ಇದು ಕಾರಣ, ಆ ಮಾತು ನುಡಿಯಲಿಲ್ಲವೆನಗೆ ಎಂದು ಹೇಳಿಹಳು.

**ನೇಮವಳಿದು ಸೀಮೆಯ ಕಳೆದು ಉಭಯ ತನು ನಷ್ಟವಾಗಿ ಬಣ್ಣದ ಭ್ರಮೆಯಳಿದು ಮೂರ್ತಿಯ ಕುರುಹ ನಷ್ಟವ ಮಾಡಿ ಸಂಗಯ್ಯನಲ್ಲಿ ಬಸವ ಭಾವವಿಲ್ಲದೆ ಬಯಲಾದೆನು :**

ನೇಮವಳಿದು ಸೀಮೆಯ ಕಳೆದು: ಶರಣಸತಿ ಲಿಂಗಪತಿ ಎಂಬ ನೇಮವಳಿದು ಪೂಜ್ಯ ನೀನು, ಪೂಜಕ ನಾನೆಂಬ ನೇಮವಳಿದು ಲಿಂಗಾರ್ಚನೆಯಲ್ಲಿ ಫಲವುಂಟು ಪದವುಂಟು ಭವವುಂಟು ಎಂಬ ನೇಮವಳಿದು. ಸೀಮೆಯ ಕಳೆದು: ಲಿಂಗವದು ಅರಿಯಲಿಲ್ಲದ ಅರುವೆಂದು ಅರಿದು, ಅರಿವ ಅರುಹಿಸಿಕೊಂಬ ಸೀಮೆಯ ಕಳೆದು, ಒಂದು ನಾಶ ಅವಿನಾಶವೆಂಬ ಸೀಮೆಯ ಕಳೆದು ಅಖಂಡಿತ ಲಿಂಗ ಅಪ್ರಮಾಣ ಶರಣನಾದುದರಿಂದ ಉಭಯ ತನು ನಷ್ಟವಾಗಿ ನಾಹಂ ಕೋಹಂ ಸೋಹಂ ಚಿದಹಂ ಎಂಬ ಮರವರುವಿನ ಅಭಿಮಾನರೂಪಿ ತನುನಷ್ಟವಾಗಿ ಬಣ್ಣದ ಭ್ರಮೆಯಳಿದು ಮೂರ್ತಿಯ ಕುರುಹ ನಷ್ಟ ಮಾಡಿ ಸಂಗಯ್ಯನಲ್ಲಿ ಬಸವ ಭಾವವಿಲ್ಲದೆ ಬಯಲಾದನು.

ಬಸವ ಬಯಲಾದ ಮಹದಿರುವು ನೋಡಿರೆ ? ದೃಷ್ಟಭಾವ ನಷ್ಟವಾದುದೆ ದೃಷ್ಟ. ಸ್ವಯವೆಂದರಿಯದುದೆ ದೃಷ್ಟ. ಪರವೆಂದರಿಯದುದೆ ದೃಷ್ಟ ಗುರು ಲಿಂಗ ಜಂಗಮ ಎನ್ನದಿಹುದೆ ದೃಷ್ಟ. ಅರಿವ ಅರುಹಿಸಿಕೊಂಬ ಈ ಉಭಯ ನಷ್ಟವಾದಲ್ಲಿ ಭಾವಕ್ಕೆಂಬಿಲ್ಲ ಶಬ್ದಮೀಸಲು ನೋಡಾ ನುಡಿಗೆಡೆಯಿಲ್ಲ ಎಡೆಗೆ ಕಡೆಯಿಲ್ಲ ಗುಹೇಶ್ವರ ಲಿಂಗ ವೇಧಿಸಲೊಡನೆ.

ಭಾವಕ್ಕೊಳಪಟ್ಟುದೆಲ್ಲವು ಬಣ್ಣದ ಭ್ರಮೆ. ಅದು ಕುರುಹಿನೊಳಗು, ಕುರುಹೆಂದರೆ ಅದು ಮೂರ್ತಿ. ಈ ಮೂರ್ತಿ ಇದ್ದಲ್ಲಿ ಭಾವ ಉಂಟು. ಬಣ್ಣದ ಭ್ರಮೆಯ ಕಳೆಯಲು ಮೂರ್ತಿಯ ಕುರುಹ ನಷ್ಟ ಮಾಡಲು ಗುರು ಕಾರುಣ್ಯವದು ತೆರಹಿಲ್ಲದ ಲಿಂಗಭರಿತವೆಂಬ ಸಂಜ್ಞೆಯ ಅರಿವುಡೆ ಭಾವನಷ್ಟ ಕುರುಹು ನಷ್ಟ ಸ್ವಯಪರವೆಂಬುದು ನಷ್ಟ ಕೂಡಲಸಂಗಯ್ಯನೆನ್ನದೆ ಶಬ್ದಮುಗ್ಧವಾದುದು ಬಸವಬಯಲಾದ ಸಂಕೇತ.

# ಮರವರುವಿನ ಮನ ಮುಗಿಸಿದ ಶರಣೆ

**ಮುಗಿಸಿದೆ ಮುಗಿಸಿದೆ ಮನದಲ್ಲಿ ನಾನು ಬಸವಾ.**
**ಘನವಕಂಡೆ ಕಂಡೆ ಮನದಲ್ಲಿ ನಾನು ಬಸವಾ,**
**ತನುವಿಲ್ಲವೆನಗೆ ಬಸವಾ.**
**ಸಂಗಯ್ಯ ಬಸವನಳಿದ ಬಳಿಕ.**

**ತಾತ್ಪರ್ಯ : ಮುಗಿಸಿದೆ ಮುಗಿಸಿದೆ ಮನದಲ್ಲಿ ನಾನು ಬಸವಾ :**

ಮನದಲ್ಲಿ ಮುಗಿಸಿದುದು ಆವುದು ? ಅವಿವೇಕ ಮನ, ವಿವೇಕ ಮನ ಎರಡನ್ನೂ ಮುಗಿಸಿದೆ. ಮರವರುವಿನ ಮನ ಇವೆರಡನ್ನು ಮುಗಿಸಿದೆ. ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ವಿಶ್ರಾಮದಲ್ಲಿ ಮುಗಿಸಿದೆ ಮುಗಿಸಿದೆ.

ಆನು ನೀನು, ಅರಿದೆ ಮರದೆ, ಅಳಿದೆ-ಉಳಿದೆನೆಂಬ ಸಂಶಯ ಭ್ರಮೆ ತತ್ವ-ಅತತ್ವ, ವಿವೇಕ, ಭ್ರಮೆ, ಸ್ಥೂಲ ಸೂಕ್ಷ್ಮ ವಿಪರೀತ ಭ್ರಮೆ, ಪುಣ್ಯ-ಪಾಪ ಸ್ವರ್ಗ-ನರಕ ಬಂಧ-ಮೋಕ್ಷ ಪ್ರವರ್ತಕ-ನಿವರ್ತಕ ಕರ್ಮ-ಬಂಧ ಭ್ರಮೆ, ಅಂತರ್ಮುಖ ಭ್ರಮೆ, ಬಹಿರ್ಮುಖ ಭ್ರಮೆ, ಅನೃತ ಭ್ರಮೆ, ನಿತ್ಯ ಭ್ರಮೆ, ಸತ್ಯ ಭ್ರಮೆ, ವಾಗದ್ವೈತ ಭ್ರಮೆ, ಅದ್ವೈತ ಭ್ರಮೆ, ಮಂತ್ರ

ಭ್ರಮೆ, ತಂತ್ರ ಭ್ರಮೆ, ನಾಹಂ ಭ್ರಮೆ, ಕೋಹಂ ಭ್ರಮೆ, ಸೋಹಂ ಭ್ರಮೆ, ತತ್ವ ವೇಷ್ಠ ಜಗ ತ್ರಯಕ್ಕೆಲ್ಲ ಮಾಯಾಮಯ ಕೂಡಲ ಚೆನ್ನಸಂಗಾ ನಿಮ್ಮ ಶರಣಂಗಾವ ಭ್ರಮೆಯಿಲ್ಲ.

ನೀಲಮ್ಮ ತಾಯಿಯು ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ವಿಶ್ರಾಮ ದಲ್ಲಿ ನಿಂತು ಮುಗಿಸಿದೆ ಮುಗಿಸಿದೆ, ಸಕಲ ಮನದ ಭ್ರಮೆಯ ತೆರಹಿಲ್ಲದ ಲಿಂಗ ಭರಿತ ವೆಂಬ ಗುರುಕಾರುಣ್ಯವ ಅರಿದರಿದು ಅರಿಯಲಿಲ್ಲದ ಅರುವಾಗಿ ಮುಗಿಸಿದೆ ಎಂದು ಹೇಳಿ ಹಳು.

ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ ನಿಃಶಬ್ದ ಲಿಂಗಾನುಭವದಿಂದ ಅಂಗವೆ ಲಿಂಗ ವಾಗಿ ಅಳಿದೆ, ಉಳಿದೆನೆಂಬ ಭ್ರಮವ ಮುಗಿಸಿದೆ. ಲಿಂಗವದು ಅರಿದು ಅರುಹಿಸಿಕೊಂಬು ದಕ್ಕೂ ಮೀರಿದ ಘನ, ಅದು ಇದ್ದಂತಿರುವ ನಿರಂತರವಾಗಿರುವ ಮಂಗಲಮಯ. ಪರಮ ಸತ್ ಸಮಸ್ವರೂಪವೆಂಬ ಲಿಂಗ ಸಾಹಿತ್ಯವಾದ ಅರುಹಿಸಿಕೊಂಬ ಷಡ್ವಿಕಾರ ತನುವೆಂಬ ಭ್ರಮವ ಮುಗಿಸಿದೆ ಮುಗಿಸಿದೆ. ಇತ್ತ ಅರಿವ ಸಾಕ್ಷಿ, ಸ್ವಯಂ ಪ್ರಕಾಶ, ಅಸಂಗ ಆತ್ಮ, ಕೂಟ ಸ್ಥನೆಂಬ ದೃಕ್ ರೂಪ ನಾನೆಂಬುದು ಮುಗಿಸಿದೆ ಮುಗಿಸಿದೆ.

ಇತ್ತ ಮನದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಕರಣಂಗಳೆ ಲಿಂಗ ಕರಣಂಗಳಾಗಿ ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಅರುವಿಂಗರುವಾಗಿಹ ಘನ ವಿಶ್ರಾಮವಾಗಿ ಆನು ನೀನೆಂಬುದು ಮುಗಿಸಿದೆ ಮುಗಿಸಿದೆ. ಅರಿದೆ ಮರಿದೆನೆಂಬುದು ಮನದಲ್ಲಿ ಮುಗಿ ಸಿದೆ. ತತ್ವ ಅತತ್ವವೆಂಬ ವಿವೇಕ ಮುಗಿಸಿದೆ. ಸ್ಥೂಲ ಸೂಕ್ಷ್ಮ, ಪುಣ್ಯ ಪಾಪ, ಸ್ವರ್ಗ ನರಕ, ಬಂಧ-ಮೋಕ್ಷ, ಪ್ರವರ್ತಕ ನಿವರ್ತಕ ಕರ್ಮ ಮುಗಿಸಿದೆ ಮುಗಿಸಿದೆ.

ಸಂಯೋಗ ವಿಯೋಗವೆಂಬೆರಡಿಲ್ಲದ ನಿಜವನಾರಯ್ಯ ಬಲ್ಲವರು. ಅದು ಕೂಡಿ ಬೆ ರಸದು ಅಗಲಿ ಹಿಂಗದು, ನುಡಿಗೆಡೆಗೊಡದ ಘನವೆ ನನ್ನಿರುವಾದಲ್ಲಿ ಸಗುಣವೆನ್ನಲಿಂಬಿಲ್ಲ ನಿರ್ಗುಣವೆನ್ನಲಿಂಬಿಲ್ಲ, ನನ್ನಲ್ಲಿ ಅರಿವುದಿಲ್ಲ ಮರೆವುದಿಲ್ಲ, ನಿರಂತರವಾಗಿಹ ನನ್ನಿರವು ನನಗೆ ತೋರಿದ ಬಳಿಕ, ಬಹಿರ್ಮುಖವೆಂಬುದಿಲ್ಲ, ಅಂತರ್ಮುಖವೆಂಬುದಿಲ್ಲ, ನುಡಿಗೊಳಪಟ್ಟು ದೆಲ್ಲ ಹುಸಿಯಾಗಿ, ಸತ್ಯ ನಿತ್ಯ ದ್ವೈತ ಅದ್ವೈತ ನಾಹಂ ಕೋಹಂ ಸೋಹಂ ಚಿದಹಂ ಇವೆಲ್ಲ ಹುಸಿ. ಮಾಯಾ ಮಯವೆಂದು ನನ್ನ ಮನದಲ್ಲಿ ಮುಗಿಸಿದೆ ಮುಗಿಸಿದೆ. ತೆರಹಿಲ್ಲದ ಲಿಂಗ ಭರಿತವೆಂಬ ಸಂಜ್ಞೆಯ ಅರಿದರಿದು ನೋಡಿ ಲಿಂಗವೆಂಬುದು ನಿರ್ನಾಮವಾಯಿತು ಭರಿತ ವೆಂಬುದು ನಿರ್ನಾಮವಾಗಿ ನಿಷ್ಪತ್ತಿಯಾಗಿ ನಿಜದಲ್ಲಿ ನಿಂದಿತ್ತು.

***ಘನವ ಕಂಡೆ ಕಂಡೆ ಮನದಲ್ಲಿ ನಾನು ಬಸವಾ :***

ಘನವ ಕಂಡುದು ನೋಡಿರೆ ? "ಘನವ ಕಂಡೆ ಅನುವ ಕಂಡೆ, ಆಯತ ಸ್ವಾಯತ ಸನ್ನಿಹಿತ ಸುಖವ ಕಂಡೆ, ಅರಿದರಿದು ಮರಹ ಮರದೆ, ಕುರುಹಿನ ಮೋಹ ಮೊರೆಗೆಡದೆ ಚೆನ್ನಮಲ್ಲಿಕಾರ್ಜುನ ನಿಮ್ಮನರಿದು ಸೀಮೆಗೆಟ್ಟೆ."

ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವ ಕಂಡೆ ನನ್ನ ಸ್ವರೂಪವ ನನ್ನಲ್ಲಿಯೆ ಕಂಡೆ, ನನ್ನಿರವು ನನ್ನಲ್ಲಿ ಸಿದ್ಧವಾದುದು ಕಂಡೆ, ನಾನೆ ಅದುವೆ ಆದುದು ಕಂಡೆ. ನನ್ನ ನಿಜದ ಸಂಬಂಧವ ಕಂಡೆ, ನನ್ನ ಕಂಡೆ, ಸುಖದ ಸುಖವ ಕಂಡೆ, ಅರಿಯಬಾರದ ಘನವ ಅರಿದು ಅರಿವ ಅರುಹಿಸಿಕೊಳ್ಳುವುದೆಂಬ ಮರಹಮರದೆ. ತೋರಿಕೆಯ ಬಣಕ್ಕೆ ಮೋಸ ಹೋಗದೆ ಚೆನ್ನಮಲ್ಲಿಕಾರ್ಜುನ ನಿಮ್ಮ ಅರಿಯಲಿಲ್ಲದ ಅರುವ ನರಿದು ಸೀಮೆಗೆಟ್ಟೆ ಮನದಲ್ಲಿ ನಾನು

ಬಸವಾ ಎಂದು ಹೇಳಿಹಳು.

***ತನುವಿಲ್ಲ, ತನುವಿಲ್ಲವೆನಗೆ ಬಸವಾ :***

ಅರಿಯಲಿಲ್ಲದ ಅರುವ ಅರಿತವರು ದೇಹಿಗೆ ದೇಹಿಯಾದವರು. ಅವರಿಗೆ ಬಹಿರ್ ತನುವಿಲ್ಲ, ಅಂತರದೇಹಿ ಎಂಬ ಇವೆರಡು ತನುವಿಲ್ಲ. ಸಮ ಸ್ವರೂಪವೆ ತನ್ನಿರುವು ಆದವ ರಿಗೆ ದೇಹವೆಂಬುದಿಲ್ಲ ದೇಹಿ ಎಂಬುದಿಲ್ಲ. ಅರುವೆಂಬುದಿಲ್ಲ ದೇಹ ನಾನೆಂಬುದಿಲ್ಲ ದೇಹಿ ನಾನೆಂಬುದಿಲ್ಲ. ಉಭಯ ಅಹಂಕಾರ ನಷ್ಟವಾಗಿ, ಅಹಮಿಲ್ಲದ ಚಿದ್ಘನವೆ ತನ್ನಿರುವಾಗಿ ತಾನಾದ ಶರಣಂಗೆ ತನ್ನಿರುವ ಮರೆಯಲುಂಟೆ ? ಇದು ಕಾರಣ ತನಗೆ ದೇಹವೆಂಬ ತನು ವಿಲ್ಲ ದೇಹಿ ಎಂಬ ತನುವಿಲ್ಲ.

ತೆರೆಹಿಲ್ಲದಭವ ನುಡಿಗೆಡೆಗೊಡದ ಘನದಿರುವು ನನ್ನರಿವು ಎಂಬುದು ನನ್ನಿಂದ ನನಗೆ ವೇದ್ಯವಾದಬಳಿಕ ತನುವಿಲ್ಲ, ತನುವಿಲ್ಲವೆನಗೆ ಬಸವ ಎಂದು ಹೇಳಿಹಳು.

***ಸಂಗಯ್ಯ ಬಸವನಳಿದ ಬಳಿಕ :***

ಸಂಗಯ್ಯನೆಂಬುದು ತೆರಹಿಲ್ಲದಭವ ನುಡಿಗೆಡೆಗೊಡದ ಘನನೊಳಗಿಹ ಇರುವಿಂಗೆ ತಾನು ಅಪ್ಪಿಕೊಂಡು ಅದುವೆ ತಾನಾದುದು ಎಂಬ ರಹಸ್ಯವ ತಿಳಿದುದು, ಸಂಗಯ್ಯ ಬಸವನ ಳಿದ ಬಳಿಕ ಎಂದು ಹೇಳಿಹರು. ಕೆಲಬರು ಬಸವಯ್ಯನ ಶರೀರ ನಶ್ವರವಾದುದಕ್ಕೆ ಬಸವನ ಳಿದನೆಂಬುದು ಇಲ್ಲಿ ಸಮಂಜಸವಾಗದು. ಅಳಿದುದು ಉಳಿದುದು ದೇಹವಲ್ಲದೆ ತಾನಲ್ಲ. ತಾನು ನಿರಂತರವಾಗಿಹ ಮಂಗಲಮಯ ಪರಮಸತ್ಯ. ಇದು ಅಭೇದ್ಯ ಸತ್ಯ. ಇಂತಪ್ಪ ನಿಜ ವರಿತು ತಾನಾಗದ ನಾಮರೂಪ ತಾನಾಗದಂತಿದ್ದುದೆ ತನ್ನ ನಾಮ ನಿರ್ನಾಮ ಮಾಡಿದ ಸೂಚಕವೆಂದು ತಿಳಿವುದು.

# ಜ್ಞಾನ-ನೆಲೆಯಿಲ್ಲದ ಜಲ

**ನೆಲೆಯಿಲ್ಲದ ಜಲವ ಹೊಕ್ಕಡೆ**
**ಆ ಜಲದ ನೆಲೆಯ ಕಾಣಬಂದಿತ್ತು ಎನಗೆ.**
**ಪಕ್ಷಿಯ ರೆಕ್ಕೆಯ ಕಂಡು ಅಕ್ಕಜಂಭೋ ಎನಲೊಡನೆ**
**ಆ ನೀರೊಳಗೆ ಉದಾರತೆಯಾದೆನಯ್ಯ ನಾನು**
**ಸಂಗಯ್ಯನಲ್ಲಿ ಬಸವಯ್ಯ ಕುರುಹಳಿದ ಮೂರ್ತಿಯಾದನು.**

**ತಾತ್ಪರ್ಯ : ನೆಲೆಯಿಲ್ಲದ ಜಲವ ಹೊಕ್ಕಡೆ ಆ ಜಲದ ನೆಲೆಯ ಕಾಣಬಂದಿತ್ತು :**

ನೆಲೆಯಿಲ್ಲದ ಜಲ ? ಅದಾವ ಜಲ ? ಅದು ತಳವಿಲ್ಲದ ಜಲ. ಇದು ಆವಾವು ದರ ಆಧಾರವಿಲ್ಲದ ಜಲ. "ನಿತ್ಯವೆಂಬ ಭಕ್ತನ ಮನೆಗೆ ಘನ ಚೈತನ್ಯವೆಂಬ ಜಂಗಮ ಬಂದರೆ, ಜಲವಿಲ್ಲದ ಜಲದಲ್ಲಿ ಪಾದೋದಕ ಮಾಡಿದಂತಾಯಿತ್ತು.

ಸ್ವಚ್ಛಾನಂದಂ ಜಲಂ ಪೀತ್ವಾ ಪುನರ್ಜನ್ಮ ನ ಸಂಶಯ ಎಂದುದಾಗಿ ಕೂಡಲ ಚೆನ್ನ ಸಂಗಮದೇವಾ." ಜಲವಿಲ್ಲದ ಜಲವೆ ಜ್ಞಾನೋದಕ ಜ್ಞಾನಾನಂದ. ಇದು ಸ್ವಚ್ಛಾನಂದ ಶುದ್ಧಾ

ನಂದ ಇದನ್ನು ಆರು ಸೇವಿಸುವುರೊ ಅವರಿಗೆ ಪುನರ್ಜನ್ಮವಿಲ್ಲ.

ಅಜಾತ ಲಿಂಗವರಿತ ಅನುಭಾವವೆ ಜಲವಿಲ್ಲದ ಜಲವಾಗಿದೆ. ಅಂತಪ್ಪ ಅಖಂಡ ಜ್ಞಾನಾಮೃತ ತನ್ನಿರುವಾದುದು ಅದುವೆ ನೆಲೆಯಿಲ್ಲದ ಜಲವು ಆಗಿಹುದು. ನೆಲೆಯಿಲ್ಲದ ಜಲವ ಹೊಕ್ಕಡೆ ಆ ಜಲದ ನೆಲೆಯ ಕಾಣಬಂದಿತ್ತು. ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವೆ ನೆಲೆಯಿಲ್ಲದ ಜಲವು. ಅಂತಪ್ಪ ಅಖಂಡಿತನ ನಿಲುವು ಅರಿವುಡೆ, ಆ ಅಖಂಡಿತನ ನಿಲುವು ತನ್ನಲ್ಲಿ ತಾನಾಗಿ ಕಾಣ ಬಂದಿತ್ತು ಎಂಬುದೆ ನೆಲೆಯಿಲ್ಲದ ಜಲವ ಹೊಕ್ಕಡೆ ಆ ಜಲದ ನೆಲೆಯು ಕಾಣ ಬಂದಿತ್ತು ಎಂದು ಹೇಳಿಹಳು.

**ಎನಗೆ ಪಕ್ಷಿಯ ರೆಕ್ಕೆಯ ಕಂಡು ಅಕ್ಕ ಜಂಭೋ ಎನಲೊಡನೆ :**

ಎನಗೆ ಪಕ್ಷಿಯ ರೆಕ್ಕೆಯ ಕಂಡುದು ಆಶ್ಚರ್ಯ. ಇದು ಗಗನ ಸದೃಶವಾಗಿಹ ಜ್ಞಾನ ಸ್ವರೂಪ ಪಕ್ಷಿ, ಇದು ಒಳ ಹೊರಗೆನ್ನದೆ ಭರಿತವಾಗಿಹ ಪಕ್ಷಿ, ತುಂಬಿ ತುಳಕದ ಪಕ್ಷಿ, ಈ ಪಕ್ಷಿಯ ಕ್ರಿಯೆ ಕಂಡು ಆಶ್ಚರ್ಯನಾದೆ.

"ಕ್ರಿಯೆ ಇಲ್ಲದ ಭಕ್ತ ಮನುಜ, ಕ್ರಿಯೆ ಇಲ್ಲದ ಮಹೇಶ ರಾಕ್ಷಸ. ಕ್ರಿಯೆ ಇಲ್ಲದ ಪ್ರಸಾದಿ ಯಮ. ಕ್ರಿಯೆ ಇಲ್ಲದ ಪ್ರಾಣಲಿಂಗಿ ಭವಿ. ಕ್ರಿಯೆ ಇಲ್ಲದ ಶರಣ ಅಜ್ಞಾನಿ. ಕ್ರಿಯೆ ಇಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ. ಕೂಡಲ ಚೆನ್ನಸಂಗಮದೇವಾ." ಕ್ರಿಯೆ ಅದಾವ ಕ್ರಿಯೆ ಇಲ್ಲದವನು ಮನ ನಷ್ಟ ಮಾಡುವ ಕ್ರಿಯೆ ಇಲ್ಲದ ಭಕ್ತ ಮನುಜ. ಉಪದೇಶ ನಷ್ಟ ಮಾಡುವ ಕ್ರಿಯೆ ಇಲ್ಲದ ಮಹೇಶ ರಾಕ್ಷಸ. ಅರ್ಪಿತ ನಷ್ಟ ಮಾಡುವ ಕ್ರಿಯೆ ಇಲ್ಲದ ಪ್ರಸಾದಿ ಯಮ, ಭಾವನಷ್ಟ ಮಾಡದ ಕ್ರಿಯೆ ಇಲ್ಲದ ಪ್ರಾಣಲಿಂಗಿ ಭವಿ. ಗಮನ ನಷ್ಟ ಮಾಡುವ ಕ್ರಿಯೆ ಇಲ್ಲದ ಜಂಗಮ ಅಜ್ಞಾನಿ. ಆಚಾರ ನಷ್ಟ ಮಾಡುವ ಕ್ರಿಯೆ ಇಲ್ಲದ ಲಿಂಗೈಕ್ಯ ಜನನಕ್ಕೊಳಗು. ಎನಗೆ ಮನ ನಷ್ಟ ಮಾಡುವ ಕ್ರಿಯೆ ಕಂಡು ಆಶ್ಚರ್ಯನಾದೆ. ಉಪದೇಶ ನಷ್ಟ ಮಾಡುವ ಕ್ರಿಯೆ ಕಂಡು ಆಶ್ಚರ್ಯನಾದೆ. ಇತ್ತ ಅರ್ಪಿತ ನಷ್ಟ ಮಾಡುವ ಕ್ರಿಯೆ ಭಾವ ನಷ್ಟಮಾಡುವ ಕ್ರಿಯೆ, ಗಮನ ನಷ್ಟ ಮಾಡುವ ಕ್ರಿಯೆ, ಆಚಾರ ನಷ್ಟ ಮಾಡುವ ಕ್ರಿಯೆ ಕಂಡುದು ಇದು ಎನಗೆ ಪಕ್ಷಿಯ ರೆಕ್ಕೆಯ ಕಂಡು ಆಶ್ಚರ್ಯನಾದೆ ನೋಡಾ.

**ಆ ನೀರೊಳಗೆ ಉದಾರತೆಯಾದೆನಯ್ಯ ನಾನು :**

ನಿತ್ಯವೆಂಬ ಭಕ್ತಳಾಗಿಹ ನೀಲಮ್ಮನ ಮನೆಗೆ ಘನ ಚೈತನ್ಯವೆಂಬ ಜಂಗಮಲಿಂಗವಾಗಿಹ ಬಸವಯ್ಯ ಬಂದುದು ಜಲವಿಲ್ಲದ ಜಲದಲ್ಲಿ ಪಾದೋದಕ ಮಾಡಿದಂತಾದುದೆ ಜ್ಞಾನಾನಂದವು ವಿಕಸಿತವಾದುದಾಗಿ ವ್ಯಾಪಕನಾದೆ ನಾನು. ನಿಃಶಬ್ದವೇದಿಯಾದೆನಯ್ಯ. ಘನ ಚೈತನ್ಯ ಜಂಗಮ ಲಿಂಗ ಒಂದಾಗಿರ್ದ ಜಂಗಮ. ಜಂಗಮ ಒಂದಾಗಿರ್ದ ಲಿಂಗ. ಉಪಮೆಗೆ ತಂದು ಎರಡೆನ್ನಬಹುದೆ? ಅಂತಪ್ಪ ಜಂಗಮ ಶುದ್ಧ ಐಕ್ಯ ನಿಲುವು. ಇಂತಪ್ಪ ಭೇದಿಸಬಾರದಂತಪ್ಪ ಅಭೇದ್ಯ ಶಿವ ಭೇದಿಸಿತಂದು ಕೊಟ್ಟುದ ಕಂಡು ಆ ಸ್ವಯಾನುಭವವೆಂಬ ನೀರೊಳಗೆ ಉದಾರತೆಯಾದೆನಯ್ಯ ನಾನು ಎಂದು ಹೇಳಿಹಳು.

***ಸಂಗಯ್ಯನಲ್ಲಿ ಬಸವಯ್ಯ ಕುರುಹಳಿದ ಮೂರ್ತಿಯಾದನು :***

ಬಸವಯ್ಯ ಕುರುಹಳಿದ ಮೂರ್ತಿಯ ನೋಡಿರೆ ! "ಗುರುವಿಲ್ಲದ ಕೂಟ, ಲಿಂಗವಿಲ್ಲದ ನೋಟ, ಜಂಗಮವಿಲ್ಲದ ಮಾಟ, ಪ್ರಸಾದವಿಲ್ಲದ ಊಟ, ಈ ನಾಲ್ಕು ಬೇಟವಿಲ್ಲದ ಕೂಟ ಕೂಡಲ ಚೆನ್ನಸಂಗಯ್ಯ ನೆನಲಿಲ್ಲದ ಆಟ."

ಬಸವಯ್ಯ ಗುರುವಿಂಗೆ ಗುರುವಾಗಿ ಗುರು ಪ್ರಸಾದಕೊಂಡ ಗುರುಲಿಂಗವಾದುದ ರಿಂದ ಗುರುವಿಲ್ಲದ ಕೂಟವಾಗಿಹುದು. ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದ ಕೊಂಡುದ ರಿಂದ ಲಿಂಗವಿಲ್ಲದೆ ನೋಟವಾಗಿಹುದು. ಜಂಗಮಕ್ಕೆ ಜಂಗಮವಾಗಿ ಜಂಗಮ ಪ್ರಸಾದ ಕೊಂಡುದರಿಂದ, ಜಂಗಮವಿಲ್ಲದ ಮಾಟವಾಗಿಹುದು. ಪ್ರಸಾದಕ್ಕೆ ಪ್ರಸಾದವಾಗಿ ಪ್ರಸಾದ ಕೊಂಡುದರಿಂದ, ಪ್ರಸಾದವಿಲ್ಲದ ಊಟವಾಗಿಹುದು. ಇವು ನಾಲ್ಕು ಬೇಟವಿಲ್ಲದ ಕೂಟವಾ ಗಿದೆ. ಇದು ಈ ನಾಲ್ಕು ತನ್ನ ಕೂಟವಾಗಿಹುದರಿಂದ ಕೂಡಲ ಚೆನ್ನಸಂಗಯ್ಯ ನೆನಲಿಲ್ಲದ ಆಟ, ಇದು ಶಬ್ದಮುಗ್ಧದಾಟ. ನಿಃಶಬ್ದವೇದಿಗಳ ಆಟ. ನಿಃಶಬ್ದ ಲಿಂಗಾನುಭವಿಗಳ ಆಟ. ಮುಗ್ಧಾನುಭವಿಗಳ ಆಟ. ಪರಿಣಾಮಾನುಭಾವಿಗಳ ಆಟ. ಇದು ಗುರುವಿಂಗೆ ಗುರುವಾಗಿಹ ತನ್ನ ಕಂಡ ಗುರುಲಿಂಗ ನೆನಲಿಲ್ಲದ ಆಟ, ಲಿಂಗಕ್ಕೆ ಲಿಂಗವಾಗಿಹ ತನ್ನ ಕಂಡ ಸ್ವಯಲಿಂಗನೆ ನ್ನದ ಆಟ. ಜಂಗಮಕ್ಕೆ ಜಂಗಮವಾಗಿಹ ತನ್ನ ಕಂಡ ನಿರ್ನಾಮ ನಿರ್ಲಿಖಿತವಾಗಿಹ ಜಂಗಮ ನೆನಲಿಲ್ಲದ ಆಟ. ಪ್ರಸಾದಕ್ಕೆ ಪ್ರಸಾದವಾಗಿ ತನ್ನ ತೃಪ್ತರೂಪ ಕಂಡು, ತೃಪ್ತಿಯಾಗಿ ತೃಪ್ತನೆನ್ನದೆ ಶಬ್ದಮುಗ್ಧವಾಗಿಹ ಆಟ. ಇವು ನಾಲ್ಕು ಸುಖದ ಸುಖವಾಗಿಹ ತನ್ನಿರುವಿನ ಮಹದಾ ನಂದದಲಕ್ಕಾಡಲು ಬಂದ ಮಾತಿಲ್ಲದವನ ಆಟ. ಇದು ಕೂಡಲಚೆನ್ನಸಂಗಯ್ಯನೆನಲಿಲ್ಲದ ಆಟವೆಂದು ಹೇಳಿಹಳು.

# ಪಶು ಕಾಯವಳಿದು ಪ್ರಸಾದಿಯಾದ ಶರಣೆ

**ಅಲ್ಲಲ್ಲಿಯ ಸುಖಂಭೋ ಎನ್ನಲಿಲ್ಲ.**
**ಅಲ್ಲಿಲ್ಲಿಯ ಪಶುತ್ವ ಇಲ್ಲಂಭೋ ಆ ಪಶು ಕಾಯವಂ ಕಳೆದು,**
**ಆ ಪರಿಣಾಮ ವಡಗಿದವಳಯ್ಯ, ಪರಿಣಾಮದ ವಿವರದಿಂದ**
**ಪರವಸ್ತುವಿನ ನೆಲೆಯ ತಿಳಿದು, ಪರಮ ಪ್ರಸಾದಿಯಾದೆನು.**
**ಪ್ರಾಣಯೋಗ ಪ್ರಸಾದ ಮೂರ್ತಿಯುಳ್ಳುವಳಾದ ಕಾರಣ**
**ಆನು ಬಸವಾ, ಬಸವಾ, ಬಸವಾ ಎನುತಿರ್ದೆನಯ್ಯ ಸಂಗಯ್ಯ**

**ತಾತ್ಪರ್ಯ : *ಅಲ್ಲಲ್ಲಿಯೆ ಸುಖಂಭೋ ಎನ್ನಲಿಲ್ಲ, ಅಲ್ಲಿಲ್ಲಿಯೆ ಪಶುತ್ವ ಇಲ್ಲಂಭೋ ಆ ಪಶು ಕಾಯವಂ ಕಳೆದು, ಆ ಪರಿಣಾಮ ವಡೆದವಳಯ್ಯ :***

ಅಲ್ಲಿಲ್ಲಿಯ ಸುಖವನ್ನು ಕಾಣುವ ಇಂದ್ರಿಯ ದೃಷ್ಟಿ ಎನ್ನಲಿಲ್ಲ. ಇಂದ್ರಿಯ ದೃಷ್ಟಿ ಅಲ್ಲಲ್ಲಿ ಅಂಗಾಂಗವ ಕಂಡು ಅಲ್ಲಲ್ಲಿ ಸುಖವೆನ್ನುವ ಕಾಮುಕ ಕಣ್ಣು ಎನ್ನಲಿಲ್ಲ. ಕಿವಿಯು ಅಲ್ಲಲ್ಲಿ ಅಂಗಾಂಗದ ಶಬ್ದ ಕೇಳಿ ಶಬ್ದಕ್ಕೆ ಮೋಹಿಸುವ ಕಿವಿ ಎನ್ನಲಿಲ್ಲ. ತ್ವಕ್ಕೇಂದ್ರ ಮೈಯೆಲ್ಲಾ ಆವರಿಸಿದೆ ತ್ವಕ್ಕು ಇದು ಅಲ್ಲಲ್ಲಿಯೆ ಸ್ಪರ್ಶಸುಖವೆನ್ನುವುದು ಎನ್ನಲಿಲ್ಲ. ಹೀಗೆ ಎಲ್ಲ ಇಂದ್ರಿಯಂಗಳು ವಿಷಯ ಕಂಡು ಸುಖವೆನ್ನುವುದು ಎನ್ನಲಿಲ್ಲ. ಇದು ಅಲ್ಲಲ್ಲಿಯೆ ಸುಖವ ಕಾಣುವ ಇಂದ್ರಿಯಂಗಳೆಂಬ ಪಶುತ್ವ ಇಲ್ಲ ನೋಡಾ.

ಇಂದ್ರಿಯಂಗಳು ತಮ್ಮ ನಿಜದರಿವು ತಿಳಿಯದ್ದರಿಂದ ಬಹಿರ್ಮುಖವಾಗಿ ವಿಷಯಂಗಳ ಭಾವಿಸುತ್ತಿಹವು. ಎನ್ನ ಇಂದ್ರಿಯಂಗಳು ನಿಜದಿರುವ ಕಂಡು ಅತೀಂದ್ರಿಯಂಗಳಾಗಿಹವು. ಕಣ್ಣು ಕಣ್ಣಿನ ಕಣ್ಣಾಗಿಹುದು. ಕಿವಿಯು ಕಿವಿಯ ಕಿವಿಯಾಗಿಹುದು. ರಸನೇಂದ್ರಿಯು ರಸದ

ರಸವಾಗಿ ಚಿದ್ರಸವಾಗಿಹುದು. ಘ್ರಾಣೇಂದ್ರಿಯು, ಘ್ರಾಣದ ಘ್ರಾಣವಾಗಿ ಸಮಸ್ವರೂಪವಾಗಿಹ ತನ್ನಿರುವಿನ ಮುಖವುಳ್ಳದ್ದಾಗಿಹುದು. ತ್ವಕ್ಕೇಂದ್ರಿಯು ತ್ವಕ್ಕಿನ ತ್ವಕ್ಕಾಗಿ ನಿಸ್ಸಂಗದ ಘನದಿರುವುಳ್ಳ ಪ್ರಭೆಯಾಗಿಹುದು. ಕಾರಣ ಪಶುತ್ವ ಇಲ್ಲವಾಗಿ ಪಶು ಕಾಯವಳಿದು, ಆನು ಅತೀಂದ್ರಿಯ ನಿರ್ಣಯವುಳ್ಳವಳಾಗಿಹೆನಯ್ಯ.

***ಪರಿಣಾಮದ ವಿವರದಿಂದ ಪರವಸ್ತುವಿನ ನೆಲೆಯ ತಿಳಿದು ಪರಮ ಪ್ರಸಾದಿಯಾದೆನಯ್ಯ:***

ಪರಿಣಾಮದ ವಿವರವ ನೋಡಿರೆ ? ಇಂದ್ರಿಯಂಗಳು, ಅತೀಂದ್ರಿಯಂಗಳಾಗಿಹ ರಹಸ್ಯವ ನೋಡಿರೆ ? ಅತೀಂದ್ರಿಯ ರಹಸ್ಯವದು ಇಂದ್ರಿಯಂಗಳ ಶುಭಾಶುಭ ದೃಷ್ಟಿ ನಷ್ಟವಾದುದು. ಅತೀಂದ್ರಿಯ ನಿಲುವು ನರರಲ್ಲಿ ಸುರರಲ್ಲಿ ತಪಸ್ವಿ ತ್ಯಾಗಿಗಳಲ್ಲಿ ಯೋಗಿಗಳಲ್ಲಿ ಅಣಿಮಾದಿ ಸಿದ್ಧಿಪಡದವರು. ಬ್ರಹ್ಮಾದಿಗಳ ಒಲಿಸಿಕೊಂಡು ಫಲಪದಂಗಳ ಪಡೆಯಲು ಜಿತೇಂದ್ರಿಯರಾಗಿರಬಹುದು. ಇವರಿಗೆ ಅತೀಂದ್ರಿ ದೃಷ್ಟಿ ಇಲ್ಲ. ಎಷ್ಟೋ ಗುರು ಶಿಷ್ಯರು ಆಗುವರು. ಅವರಲ್ಲಿ ಗುರುವಿಂಗೆ ಗುರುವಾಗಿಹ ಗುರುಲಿಂಗ ತನ್ನೊಳಗೆ ತನ್ನ ಸ್ವರೂಪವಾಗಿ ಕಂಡವರು ಸಿಕ್ಕುವುದು ದುರ್ಲಭ. ಕಾರಣ ''ನರರಿಗೆಯ್ದ ಗುರುವಪ್ಪ ಹಿರಿಯರು ನೀವು ಕೇಳಿರೆ ? ನಿಮ್ಮ ಗುರುತನ ಕೆಟ್ಟು, ಶಿಷ್ಯರ ಶಿಷ್ಯತನ ಕೆಡಿಸಬಲ್ಲಡೆ ಅವರ ಹಿರಿಯರೆಂಬೆ ಕೂಡಲ ಚೆನ್ನ ಸಂಗಮದೇವಾ.''

ಗುರುಗಳಾಗಿಹ ಹಿರಿಯರು ಸಿಕ್ಕುವರು. ಶಿಷ್ಯರು ಗುರುಭಾವ ಮಾಡಿದವರು ಸಿಕ್ಕುವರು. ತಮ್ಮ ತಮ್ಮ ಮರವರುವಿನ ಅಭಿಮಾನ ಕಳೆದುಕೊಂಡು ಒಂದಾದವರು ಸಿಕ್ಕುವುದು ಅತಿ ವಿರಳ. ಕಾಯ ಒಂದು ಪ್ರಾಣ ಒಂದು ಭಾವ ಒಂದು ನಿರ್ಭಾವ ಒಂದು ಗುರು ಒಂದು ಲಿಂಗ ಒಂದು ಉಪದೇಶ ಒಂದು. ಒಂದಲ್ಲದೆ ಎರಡುಂಟೆ ? ಕೂಡಲಚೆನ್ನಸಂಗಮದೇವಾ. ಪರಿಣಾಮದ ವಿವರದಿಂದ ಪರವಸ್ತುವಿನ ನೆಲೆಯ ತಿಳಿದು ಪರಮ ಪ್ರಸಾದಿಯಾದೆನು. ಒಂದರ ರಹಸ್ಯ ಶಬ್ದಕ್ಕೆ ತೆರಹಿಲ್ಲದ ರಹಸ್ಯ ನಿಶಬ್ದವೇದಿಗಳು ಎಲ್ಲೆಲ್ಲೂ ಒಂದನ್ನೆ ಕಂಡ ಮಹದಿರುವು. ಇದು ಅತೀಂದ್ರಿಯರಾದ ಚಿನ್ಹ.

ಇಂದ್ರಿಯಂಗಳು ತಮ್ಮ ತಮ್ಮ ಶುಭಾಶುಭ ಕ್ರಿಯದ ಫಲ ಪದಂಗಳಿಂದ ಬಿಡುಗಡೆಯಾಗಿ ನಿಸ್ಸಂಗದಿರುವು ತಿಳಿದುದು. ನಿಸ್ಸಂಗದಿರುವು ಇದು ಒಳಹೊರಗೆನ್ನದೆ ಭರಿತವಾಗಿಹ ಇರವು ತೆರಹಿಲ್ಲದ ಘನವಾಗಿಹ ತನ್ನಿರುವು ಕಂಡುದು. ಅದು ನುಡಿಕೆಟ್ಟ ನಡೆಕೆಟ್ಟ ಸಮ ನಿಲುವು. ಅಲ್ಲಿ ಶುಭಂಗಳ ಹಿಡಿದುದಿಲ್ಲ, ಅಶುಭಂಗಳ ಬಿಟ್ಟುದಿಲ್ಲ, ಅಹಂತ್ವ ಬಿಟ್ಟುದಿಲ್ಲ, ನಿರಹಂ ಹಿಡಿದುದಿಲ್ಲ, ನಾಹಂ, ಕೋಹಂ, ಕಂಡುದಿಲ್ಲ, ಸೋಹಂ, ಚಿದಹಂ, ಹಿಡಿದುದಿಲ್ಲ, ತನ್ನಿಂದ ತನ್ನ ಕಂಡು ತಾನು ಮಾತಿಲ್ಲದವನಾದುದು ತನ್ನಿಂದ ತಾನೆ ಕಂಡು ತನ್ನ ಮಾತಿನ ಹಂಗ ತಾನೆ ಹರಿದು, ಮಾತಿಲ್ಲದ ಘನದಿರುವೆ ತನ್ನದಾಗಿ ತನ್ನ ಅತೀಂದ್ರಿಯಾಗಿಹ ಸ್ವಸ್ವರೂಪವ ಕಂಡು ಪರವಶವಾದುದು. ಇದು ಪರಿಣಾಮ, ತನ್ನ ಪರಿಣಾಮ; ತಾನಾರೆಂದರಿತ ತನ್ನ ಇರುವಿನ ಪರಿಣಾಮ. ಇಂತಪ್ಪ ಪರಿಣಾಮದ ವಿವರದಿಂದ ತಾನು ನಿರಂತರ ಮಂಗಲಮಯನಾಗಿಹ ಅಭೇದ್ಯಸತ್ಯ ಎಂದು ತನ್ನಿಂದ ತನಗೆ ವಿದಿತವಾದುದು. ಹೀಗೆ ಪರವಸ್ತುವಿನ ನೆಲೆಯ ತಿಳಿದು ಪರಮ ಪ್ರಸಾದಿಯಾದುದರಿಂದ ಪರಮ ಪ್ರಸಾದಿಯಾದೆನು ಎಂದು ಹೇಳಿಹಳು.

**ಪ್ರಾಣ ಯೋಗ ಪ್ರಸಾದ ಮೂರ್ತಿಯುಳ್ಳವಳಾದ ಕಾರಣ ಆನು ಬಸವಾ, ಎನುತಿರ್ದೆನಯ್ಯ ಸಂಗಯ್ಯ :**

ಪ್ರಾಣಯೋಗ ತಿಳಿದವರು, ಅವರು ಪ್ರಸಾದ ಮೂರ್ತಿಗಳು. ಕೆಲಬರು ಪ್ರಸಾದವೆಂಬ ಪರಮ ಜ್ಞಾನ ಪರಮಾನಂದ ಪರಮಾಮೃತ ತನ್ನಿರವು ಆಗದೆ, ಪ್ರಾಣಾಯಾಮ ಸಾಧನದಿಂದ ಕೇವಲ ಕುಂಭಕ ಸಾಧಿಸಿ ತನ್ನ ಶರೀರವ ಮರೆವುದು ಎಂದು ತಿಳಿದಿಹರು. ಹಾಗೆ ತಿಳಿದರೆ, ಅವರು ಅಮರತ್ವದ ಹೊಲಬನರಿಯದವರು. ಪ್ರಾಣಯೋಗವದು ಪ್ರಾಣದ ಪ್ರಾಣವು. ಅದು ಪ್ರಾಣಲಿಂಗ, ಪ್ರಾಣಲಿಂಗವರಿಯುವುದೇ ಪ್ರಸಾದಮೂರ್ತಿಗಳಾದ ಚಿನ್ಹ, ಪ್ರಸಾದರೂಪಿ ಪರಮಜ್ಞಾನವದು ಅರುವಿಂಗರುವಾದುದು. ದೇಹಿಗೆ ದೇಹಿಯಾದುದು. ನಿಃಶಬ್ದ ಬ್ರಹ್ಮ ಇರುವೆ ತನ್ನಿರುವಾಗಿ ಹೊಗಳಿಕೆಗೆ ಸಿಕ್ಕದವರಾದುದರಿಂದ ಅಂತಪ್ಪ ನಿಃಶಬ್ದ ಲಿಂಗಾನುಭವಿಯಾಗಿ ತನ್ನಿಂದ ತನ್ನ ಕಂಡುದರಿಂದ ಇಂತಪ್ಪ ಮಹದಿರುವ ಕರುಣಿಸಲು ಬಸವರಸರು ಕಾರಣರೆಂದು ಪ್ರಾಣಯೋಗ, ಪ್ರಸಾದ ಮೂರ್ತಿಯುಳ್ಳುವಳಾದ ಕಾರಣ, ಆನು ಬಸವಾ, ಬಸವಾ, ಬಸವಾ ಎನುತಿರ್ದೆನು ಸಂಗಯ್ಯ ಎಂದು ಹೇಳಿಹಳು.

# ತನು ಅರಿವಿನ ಕುರುಹು

**ಆಡಲಿಲ್ಲವಯ್ಯ ನಾನು ಹೆಣ್ಣು ರೂಪಧರಿಸಿ,**
**ನುಡಿಯಲಿಲ್ಲವಯ್ಯ ನಾನು ಹೆಣ್ಣು ರೂಪ ಧರಿಸಿ,**
**ನಾನು ಹೆಣ್ಣಲ್ಲದ ಕಾರಣ, ನಾನು ಇರಪರ**
**ನಾಸ್ತಿಯಾದವಳಯದಯ, ನಾನು ಉಭಯದ ಸಂಗವಕಂಡು**
**ಕಾಣದಂತಿದ್ದೆನಯ್ಯ. ಸಂಗಯ್ಯ ಬಸವ ಬಯಲು ಕಂಡ ಕಾರಣ**

**ತಾತ್ಪರ್ಯ : *ಆಡಲಿಲ್ಲವಯ್ಯ ನಾನು ಹೆಣ್ಣು ರೂಪಧರಿಸಿ, ನುಡಿಯಲಿಲ್ಲವಯ್ಯ ನಾನು ಹೆಣ್ಣು ರೂಪ ಧರಿಸಿ :***

ಹಿಡಿದು ಬಿಟ್ಟಡೆ ಮಹಾಪ್ರಮಥರಿಗೆ ದೂರ, ನೀಲಮ್ಮ ತಾಯಿ ಮಹಾಪ್ರಮಥದ ಸ್ಥಾನದಲ್ಲಿ ಅಗ್ರಗಣ್ಯಳು. ಹಿಡಿದದ್ದು ಬಿಡದವರು. ಏನನ್ನು ಹಿಡಿದದ್ದು ಬಿಡದವರು. ಅರುವ ಅರಿಯ ಹೇಳಿ, ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟುದನು ಹಿಡಿದವರು. ಅಂದರೆ ಅರುವ ಅರಿಯ ಹೋದವರು ಅರಿದರಿದು ಅರಿಯಬಾರದ ಘನವರಿತು ಅರಿಯದಂತಿದ್ದವರು.

''ರೂಪವನೆ ಕಂಡು ನಿರೂಪನೆ ಕಾಣರು. ತನುವನೆ ಕಂಡು, ಅನುವನೆ ಕಾಣರು. ಆಚಾರವನೆ ಕಂಡು ವಿಚಾರವನೆ ಕಾಣರು ಗುಹೇಶ್ವರಾ ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು.'' ನೀಲಮ್ಮ ತಾಯಿ ಗುರುಕಾರುಣ್ಯದ ರೂಪವನೆ ಕಂಡು ನಿರೂಪಿಯಾದಳು. ತನುವನೆ ಕಂಡು ಸ್ವಯಲಿಂಗಿಯಾದಳು. ಆಚಾರವ ಕಾಣದೆ ವಿಚಾರವ ಕಂಡಳು. ಗುಹೇಶ್ವರನೆಂಬುದು ಸಕಲರ ಇರವು. ಆ ಸ್ವರೂಪ ಕಂಡು ಅದುವೆ ಆದುದರಿಂದ ಗುರು ಕಾರುಣ್ಯ ಹಿಡಿದುದು ಬಿಡಲಿಲ್ಲ, ಅರುವ ಅರಿದರಿದು ಅರುಹೃದಯವಾಯಿತ್ತು. ಅರು ಹೃದಯವಾ

ದುದರಿಂದ ಮರವ ಕಾಣಲಿಲ್ಲ. ಮರವಿನಲ್ಲಿ ಕಂಡ ಭ್ರಾಂತಿ ನೋಟ ಭ್ರಾಂತಿ ಭಾವ ಭ್ರಾಂತಿ ಕಾಣಲಿಲ್ಲ. ಅರು ಹೃದಯವಾಗಿ ಅರಿಯಲಿಲ್ಲದ ಅರುವೆ ತನ್ನಿರುವು ಆದುದರಿಂದ ಅರಸಿಕೊಳ್ಳುವ ಅನಾತ್ಮ ತಾನಾಗಲಿಲ್ಲ. ತಾನಾಗಿ ಆಡಲಿಲ್ಲ. ಇದು ಕಾರಣ, ಇವರು ಹಿಡಿದದ್ದು ಬಿಡದ ಮಹಾಪ್ರಮಥರು. ಲೋಕ ದೃಷ್ಟಿಯಲ್ಲಿ ಹೆಣ್ಣಾಗಿ ಕಾಣಬಹುದು. ತಾನು ಮಾತ್ರ ನುಡಿಯಲಿಲ್ಲವಯ್ಯ. ನಾನು ಹೆಣ್ಣು ರೂಪ ಧರಿಸಿ ಎಂದು ಬಿತ್ತರಿಸಿದುದು ನೋಡಿದಡೆ ತನ್ನಿಂದ ತನ್ನ ಅರಿತವಳು.

**ನಾನು ಇರಪರ ನಾಸ್ತಿಯಾದವಳಯ್ಯ ನಾನು:**

''ಅರಿತವನೆಂತು ಸತ್ತನು. ಅರಿತವನೆಂತು ಹುಟ್ಟಿದನು. ಅರಿತವನೆಂತು ಅಘೋರ ಪಾಶಕ್ಕೆ ಒಳಗಾದನು. ಅರಿತವನೆ ಚಿರಂಜೀವಿ ನೋಡಾ. ಕಪಿಲಸಿದ್ಧ ಮಲ್ಲಿಕಾರ್ಜುನ.'' ಶರಣ ಶರಣೆಯರು ಅರಿತವರು ತಾನಾರೆಂದು ತನ್ನ ಅರಿತವರು. ತನ್ನ ಅರಿತುದು ಹೇಗೆ ? ಅರಿದ ರುಹಿಸಿಕೊಂಬುದಕ್ಕೂ ಮೀರಿದ ಘನವೆ ತನ್ನಿರುವೆಂದು ಅರಿಯ ಹೋಗಿ ಅನುಪಮ ಲಿಂಗವಾದವರು. ತೆರಹಿಲದ್ದ ಘನದಿರುವ ಅರಿತು ಶಬ್ದಮುಗ್ಧವಾದವರು. ನುಡಿಗೆಡೆಗೊಡದ ಘನದಿರುವೆ ತನ್ನಿರುವು ಆದವರು. ಅವರು ಅರಿತವರು. ಅಂತಪ್ಪ ಮಹಾಘನನಾಗಿಹ ಶರಣ ಸತ್ತುದು ಹೇಗೆ ? ಬಯಲು ಅದಾವ ಪಾಶಕ್ಕೆ ಒಳಗಾಗುವುದು ? ಬಯಲು, ಅದು ಹುಟ್ಟಿದುದು ಎಂದು ? ಅದು ಸತ್ತುದು ಎಂದು ? ಲೋಕದ ಕಾರ್ಯಕ್ಕಾಗಲಿ, ಆವುದೆ ಕಾರ್ಯಕ್ಕೆ ಒಳಪಟ್ಟುದೆಂದು ? ಹಾಗೆಯೇ ಗಗನ ಸದೃಶನಾಗಿಹ ಅಖಂಡ ಜ್ಞಾನಾಮೃತಮಯನು. ಅವನೆಂತು ಸತ್ತನು ? ಅವನೆಂತು ಹುಟ್ಟಿದನು. ಅವನೆಂತು ಅಘೋರ ಪಾಶಕ್ಕೆ ಒಳಗಾದನು. ಈ ಶರಣನು ಸದಾ ಇದ್ದಂತಿರುವ ಮಂಗಲಮಯ ಚಿಜ್ಯೋತಿ ತಾನೆಂಬುದು ಬಲ್ಲವಳಾದುದರಿಂದ ನಾನು ಹೆಣ್ಣಲ್ಲದ ಕಾರಣ ಇಹಪರನಾಸ್ತಿಯಾದವಳಯ್ಯ ಎಂದು ಹೇಳಿಹಳು.

ಆರು ನಾಮರೂಪವ ಒಪ್ಪಿಹರು ಅವರು ಉಪಾಧಿವುಳ್ಳವರು. ಒಡಲುಳ್ಳವರು. ಆರು ಒಡಲುಳ್ಳವರಾಗಿಹರು ಅಲ್ಲಿ ಅಹಂ, ಮಮವೆಂಬ ಒಡಲುಂಟು. ಕತೃತ್ವ ಭೋಕ್ತೃತ್ವವು ಉಂಟು. ಇಹಪರವು ಉಂಟು. ಪುಣ್ಯವುಂಟು. ಪಾಪವುಂಟು. ಸುಖವುಂಟು. ದುಃಖವುಂಟು. ರಾಗವುಂಟು, ದ್ವೇಷವುಂಟು. ಸ್ವರ್ಗವು ಉಂಟು, ನರಕವು ಉಂಟು. ಬಂಧವು ಉಂಟು. ಮೋಕ್ಷವು ಉಂಟು. ನೀಲಮ್ಮ ತಾಯಿಯು ನಾಮರೂಪ ಆಗದ ಶಕ್ತಿ, ಅದು ನಿರುಪಾಧಿ ಒಡಲು ನಷ್ಟ ಮಾಡಿದ ಶಕ್ತಿ. ಕಲ್ಪಿತವನ್ನೇ ನಷ್ಟಮಾಡಿದ ಶಕ್ತಿ. ಭಾವರೂಪ ಭ್ರಮೆಯನ್ನೇ ನಷ್ಟ ಮಾಡಿದ ಮಹಾಶಕ್ತಿಯಾದುದರಿಂದ ನಾನು ಹೆಣ್ಣಲ್ಲದ ಕಾರಣ ಇಹಪರ ನಾಸ್ತಿಯಾದವಳಯ್ಯ ಎಂದು ಹೇಳಿಹಳು.

**ಉಭಯದ ಸಂಗವ ಕಂಡು ಕಾಣದಂತಿದ್ದೆನಯ್ಯ ಸಂಗಯ್ಯ :**

ಬಸವ ಬಯಲು ಕಂಡ ಕಾರಣ, ಬಸವರಸರ ನಿರವಧಿಯಾಗಿಹ ನಿಲುವು. ಅದು ಅರಿಯಲಿಲ್ಲದ ಅರುವು ಅಂತಪ್ಪ ಮಹದರುವ ಸ್ವೀಕರಿಸಿ ಅರಿಯಲಿಲ್ಲ, ಮರೆಯಲಿಲ್ಲ, ನಿಜವು ನಿಂದಿತ್ತಾಗಿ ಎಂದು ಉಭಯ ಸಂಗವ ಕಂಡು, ಒಂದು ಸಾವಯವ ಸಂಗ, ಇನ್ನೊಂದು ನಿರವಯ ಸಂಗ, ಒಂದು ಅರುಹಿಸಿಕೊಂಬ ಅನಾತ್ಮ ಸಂಗ, ಒಂದು ಅರಿವ ದೃಕ್ ರೂಪಾತ್ಮನ ಸಂಗವ ಕಂಡು ನಾನು ಬಸವನ ಬಯಲಾಗಿಹ ಅರಿಯಲಿಲ್ಲದ ಅರುವನ

ರುಹಿಸಿದ ಶ್ರೀಗುರುವನರಿಯಲುಂಟೆ ? ಬಸವಯ್ಯ. ನಿಜದಲ್ಲಿ ನಿಂದುದು ಅದೆಂತುಸರುವುದು. ಅಲ್ಲಿ ಆನೆಂಬುದು ನಿರ್ನಾಮ. ನೀನೆಂಬುದು ನಿರ್ನಾಮ. ಅಹುದೆಂಬುದು ನಿರ್ನಾಮ. ಅಲ್ಲೆಂಬುದು ನಿರ್ನಾಮ. ಅರುಹಿಸಿಕೊಂಬುದೆಂಬುದು ನಿರ್ನಾಮ. ಅರಿವ ದೃಕ್ ಎಂಬುದು ನಿರ್ನಾಮವಾಗಿ ಮನವು ನಿಜದಲ್ಲಿ ನಿಂತ ವಿಶ್ರಾಮ. ಅದು ತೆರಹಿಲ್ಲದ ವಿಶ್ರಾಂತಿ. ಸುಖದ ಸುಖ ಅದನ್ನು ವಾಣಿಯಿಂದ ಉಸರುವದದೆಂತು.

ಬಯಲು, ಬಯಲಾದುದು ಅದು ಬಯಲೆನ್ನಬಹುದೆ ? ಬಯಲೆಂಬುದು ಅದು ಬಯಲಾದುದೆ ? ಬಯಲು ಹೇಗೆ ಶಬ್ದಮುಗ್ಧವೊ, ಹಾಗೆ ಲಿಂಗೈಕ್ಯದ ನಿಲುವು ಶಬ್ದಮುಗ್ಧ ನಿಲುವು. ಸುಖದ ಸುಖವಾಗಿಹ ತನ್ನಿರುವು ತನಗೆ ಪ್ರಜ್ವಲಿಸಿದುದು ಮಾತಿಲ್ಲದವ ತಾನಾದ ಹಿರಿಮೆ ಇದು ಬಸವ ಬಯಲು ಕಂಡ ಕಾರಣ ಎಂದು ಹೇಳಿಹಳು.

# ಕತ್ತಲು ಬೆಳಗು ಕಾನದ ನಿರಂತರ ಜ್ಯೋತಿ

**ಆ ನೆತ್ತಲೀ ಸಂಸಾರವೆತ್ತ !**
**ಆನೆತ್ತಲೀ ಕಾಯವೆತ್ತ !**
**ಆ ನೆತ್ತಲೀ ನಿಜ ಮಹತ್ವವೆತ್ತ !**
**ಸಂಗಯ್ಯನೆತ್ತ ! ಬಸವನೆತ್ತ ಆ ನೆತ್ತ !**

**ತಾತ್ಪರ್ಯ** : ***ಆನೆತ್ತ ಲೀ ಸಂಸಾರವೆತ್ತ*** :

ಆನೆತ್ತ ! ಈ ಸಂಸಾರವೆತ್ತ, ಬೆಳಕೆತ್ತ, ಕತ್ತಲೆ ಎತ್ತ ! ಅವಿನಾಶಿ ಎತ್ತ, ನಾಶವೆತ್ತ, ನಿರೂಪವೆತ್ತ, ರೂಪವೆತ್ತ, ನಾಮವೆತ್ತ, ನಿರ್ನಾಮವೆತ್ತ, ಭಯವೆತ್ತ, ನಿರ್ಭಯವೆತ್ತ, ನಿರ್ನಾಮನಾಗಿಹ ಆನೆತ್ತ, ನಾಮರೂಪಿ ತೋರುವ ವಿಕಾರವೆತ್ತ, ಅಜಾತನಾಗಿಹ ಆನೆತ್ತ, ಹುಟ್ಟು ಸಾವುಳ್ಳ ತೊಳಲುವ ಬಳಲುವ ಸಂಸಾರವೆತ್ತ, ಸುಖದ ಸುಖವಾಗಿಹ ಆನೆತ್ತ.

ಸಾಕಾರ ನಿರಾಕಾರವೆಂಬೆರಡು ಸ್ವರೂಪಂಗಳು, ಒಂದು ಆಹ್ವಾನ, ಒಂದು ವಿಸರ್ಜನೆ. ಒಂದು ವ್ಯಾಕುಲ, ಇನ್ನೊಂದು ನಿರಾಕುಳ, ಉಭಯ ಕುಳ ರಹಿತ ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತ. ನಿರ್ನಾಮ ನಿರೂಪನಾಗಿಹ ಆನೆತ್ತ. ನಾಮರೂಪಗಳಿಂದುಕ್ತವಾಗಿ ತೋರುವ ಷಡ್ವಿಕಾರವಾಗಿಹ ತನುವೆತ್ತ, ಅಕರ್ತಾ, ಅಬೋಕ್ತಾನಾಗಿಹ ಆನೆತ್ತ, ಕರ್ತೃತ್ವ, ಭೋಕ್ತೃತ್ವಗಳಿಗೀಡಾಗಿ ನರಳುವ ಅರಸುವ ಆಲಾಪಿಸುವ ಭಯ ಚಿಂತೆ ಸಂತಾಪಗಳಿಂದುಕ್ತವಾದ ಸಂಸಾರವೆತ್ತ, ಅತೀಂದ್ರಿಯನಾಗಿಹ, ಆನೆತ್ತ ! ಇಂದ್ರಿಯಂಗಳು ವಿಷಯಂಗಳ ಸಂಯೋಗದಿಂದುಕ್ತವಾಗಿ ಶುಭಾಶುಭ ಕ್ರಿಯಂಗಳ ಫಲರೂಪವಾದ ರಾಗದ್ವೇಷರೂಪಿ ಸಂಸಾರವೆತ್ತ, ಸಮತೆಯೆ ನನ್ನಿರುವಾಗಿಹ ಸ್ವಯಂಪ್ರಕಾಶವಾಗಿಹ ಆನೆತ್ತ, ವಿಷಮ ರೂಪಿ ಲಾಭ ಹಾನಿಯಿಂದುಕ್ತವಾದ ಸಂಸಾರವೆತ್ತ, ಮಾನಾಪಮಾನ ಕಾಣದ ನನ್ನ ಚಿದಂಗವೆತ್ತ !, ಮಾನಾಪಮಾನವೆ ಪ್ರಧಾನವಾಗಿ ಭಯಕಂಪನದಿಂದುಕ್ತವಾದ ಸಂಸಾರವೆತ್ತ, ನಿರಾಕುಳನಾಗಿಹ ನಾನೆತ್ತ ! ವ್ಯಾಕುಲವಾಗಿಹ ಸಂಸಾರವೆತ್ತ ! ತೋರಿ ಕೆಡುವ ಸಂಸಾರವೆತ್ತ ! ತೋರಬಾರದ ಘನವಾಗಿಹ ಆನೆತ್ತ.

***ಆನೆತ್ತ ಲೀ ಕಾಯವೆತ್ತ*** :

ಆನೆತ್ತ, ಈ ಕಾಯವೆತ್ತ, ಮರುವಿನಿಂದುಕ್ತವಾದ ಅಹಂಕಾರಕ್ಕೆ ಆನೆನ್ನಬೇಕೆ ? ಇತ್ತ

ಅರುವಿನಿಂದುಕ್ತವಾದ ಚಿದಹಮ್ಮಿಗೆ ನಾನೆನ್ನ ಬೇಕೆ ? ಕಾರಣ, ಅಹಂಕಾರದಿಂದುಕ್ತವಾದ ಈ ಕಾಯವೆತ್ತ ? ಅಹಮಿಲ್ಲದ ಚಿದ್ಘನನಾದ ಆನೆತ್ತ, ತೋರುವ ಷಡ್ವಿಕಾರವುಳ್ಳ ಈ ಕಾಯವೆತ್ತ, ನುಡಿಗೆಡೆಗೊಡದ ಘನನಾಗಿಹ ಆನೆತ್ತ, ಕಲ್ಪಿತಕ್ಕೆ ಒಪ್ಪಿದ ಕಾಯವೆತ್ತ, ಕಲ್ಪನಾರಹಿತನಾಗಿಹ ಆನೆತ್ತ, ಗುರುವಿಂಗೆ ಗುರುವಾಗಿಹ ಆನೆತ್ತ, ಗುರುಶಿಷ್ಯರೆಂಬ ಪ್ರತಿಭಾವವುಳ್ಳ ಕಾಯವೆತ್ತ, ಭಾವಕ್ಕೆ ಒಪ್ಪಿದ ಭ್ರಮರೂಪಿ ಕಾಯವೆತ್ತ ! ಭಾವಸೂತಕವಳಿದು, ಬ್ರಹ್ಮನೆಮ್ಮಗೆ ಯಂ ತಿಳಿದು ಮನ ವಿಶ್ರಾಂತಿಯ ನೆಯ್ದ ಆನೆತ್ತ, ಆನೆಂಬುದೆತ್ತ ! ಆನು ನೀನೆಂಬುದಳಿದು ತೆರಹಿ ಲ್ಲದ ಘನವಾಗಿಹ ಆನೆತ್ತ ಉದಯಾಸ್ತದಿಂದುಕ್ತವಾದ ಕಾಯವೆತ್ತ, ಉದಯಾಸ್ತ ಕಾಣದ ನಿತ್ಯನಿರಂಜನ ತಾನಾದ ಸ್ವಯಂಜ್ಯೋತಿ ಎತ್ತ !

***ಆನೆತ್ತ ಲೀ ನಿಜ ಮಹತ್ವವೆತ್ತ*** :

ಸಂಜ್ಞೆಯ ನಿಜವಾಗಿಹ ಗುರುಕರುಣೆ ಎತ್ತ ! ಸಕಲರ ಹೃದಯದಲ್ಲಿ ನ್ಯಸ್ತವಾಗಿಹ ಗುರುಲಿಂಗದುದಯ ರೂಪಿ ಆನೆತ್ತ, ಹೆತ್ತರಿವು ಎತ್ತ, ನಿಜದಿರುವಾಗಿಹ ಆನೆತ್ತ, ನಿಜ ನಿಜವೆಂದು ಹಲಬುವ ನಿಜವೆತ್ತ. ನಿಜವೆನ್ನದೆ ನಿಜವಾಗಿಹ ಘನವೆತ್ತ ! ನುಡಿಯಿಂದುಕ್ತವಾದ ನಿಜಮಹತ್ವವೆತ್ತ, ನುಡಿಗೆ ಅವಕಾಶಕೊಡದೆ ಎಲ್ಲೆಲ್ಲೂ ತುಂಬಿದ ಆನೆತ್ತ! ಆನೆಂಬುವ ಆನೆತ್ತ, ಆನೆನ್ನದ ಶಬ್ದಮುಗ್ಧವಾಗಿಹ ತನ್ನಿರುವ ಕಂಡ ಆನೆತ್ತ, ಮಾತಿಲ್ಲದವನಾಗಿಹ ಆನೆತ್ತ, ಮಾತಿ ನಿಂದುಕ್ತವಾಗಿಹ ನಿಜ ಮಹತ್ವವೆತ್ತ.

***ಸಂಗಯ್ಯವೆತ್ತ, ಬಸವನೆತ್ತ, ಆನೆತ್ತ*** :

ಹೊರದೃಷ್ಟಿಗೆ ಕಪ್ಪಡದಲ್ಲಿ ನೆಲಿಸಿದ ಸಂಗಯ್ಯನೆತ್ತ, ಸಂಗಯ್ಯನಾಗಿ ಪೂಜಿಸಿಕೊಂಡ ಸಂಗಮ ದೇವನೆತ್ತ, ಇತ್ತ ಭಕ್ತನಾಗಿ ಪೂಜಿಸಿದ ಭಕ್ತನೆಂಬ ಬಸವನೆತ್ತ ! ನಿಜದೃಷ್ಟಿಗೆ ತೆರಹಿ ಲ್ಲದ ಲಿಂಗ ಭರಿತನಾಗಿಹ ಸಂಗಯ್ಯನೆತ್ತ ಇತ್ತ ಬಸವಯ್ಯ ಘನಗಂಭೀರ ಸಂಗಯ್ಯನ ಅರಿ ಯಹೋಗಿ ಘನಕ್ಕೆ ಘನನಾದುದೆತ್ತ, ಇದಲ್ಲದೆ ಕೂಡಲ ಸಂಗಯ್ಯನೆಂಬ ಬೆಳಗಿಂಗೆ ಬೆಳಗಾಗಿ ಶಬ್ದಮುಗ್ಧನಾ ಬಸವಯ್ಯನೆತ್ತ, ಇತ್ತ ಬಸವಯ್ಯನ ಹೆಂಡತಿಯಾದ ನಾನೆತ್ತ, ಇದಲ್ಲದೆ ಅಂತಪ್ಪ ಘನಕ್ಕೆ ಘನನಾದ ಬಸವಂಗೆ ಶಿಶುವಾದುದೆತ್ತ, ಬಸವನೆನಗೆ ಶಿಶುವಾದುದೆತ್ತ, ಪ್ರಮಥರು, ಪುರಾತನರು, ಸಾಕ್ಷಿಯಾಗಿ ಸಂಗಯ್ಯನಿಕ್ಕಿದ ದಿಬ್ಯವ ಮೀರಿದೆ ಬಸವನೊಳಗಾನಡಗಿದೆ. ಸಂಗ ಯ್ಯನೆತ್ತ, ತೆರಹಿಲ್ಲದ ಘನಲಿಂಗವಾಗಿಹ ಸಂಗಯ್ಯನೆತ್ತ, ಸಂಗ ತೆರಹಿಲ್ಲದ ಲಿಂಗಭರಿತವಾ ದುದು ಅರಿಯ ಹೋಗಿ ನಿರ್ನಾಮ ಮಾಡಿದ ಬಸವಯ್ಯನೆತ್ತ, ಇಂತಪ್ಪ ನಿರ್ನಾಮ ಮಾಡಿದ ಬಸವರಸರೊಳಗಡಗಿದ ನಾನೆತ್ತ ಎಂದು ಹೇಳಿಹಳು.

# ಕರಣಂಗಳ ಹಂಗ ಹರಿದ ಮಹಾ ಕಿರಣ

**ಕರಣಂಗಳ ಹಂಗ ಹರಿದು, ಕರಣಂಗಳ ಮುಖವನಳಿದು,**
**ಶರಣರ ಪರಿಣಾಮದಲ್ಲಿ ಮುಕ್ತಿಯನರಿದೆನಯ್ಯ,**
**ಬಸವನ ಕುರುಹ ಕಂಡು ಪ್ರಸನ್ನೆಯಾದೆನಯ್ಯ,**
**ಪ್ರಸನ್ನ ಪರಿಣಾಮವಿಡಿದು, ಆನು ಬದುಕಿದೆನಯ್ಯ ಸಂಗಯ್ಯ.**

ತಾತ್ಪರ್ಯ : *ಕರಣಂಗಳ ಹಂಗ ಹರಿದು, ಕರಣಂಗಳ ಮುಖವನಳಿದು,* :

ಕರಣಂಗಳ ಲಕ್ಷಣವೇನು ? ಮತ್ತು ಅವುಗಳ ಹೆಸರೇನು ? ಮನ, ಬುದ್ಧಿ, ಚಿತ್ತಾ, ಅಹಂಕಾರ, ಜ್ಞಾತೃ, ಇವು ಐದು ಪಂಚಕರಣಂಗಳು ಮನ; ಇಲ್ಲದುದು ಕಲ್ಪಿಸುವುದೆ ಸಂಕಲ್ಪ ಇದ್ದುದನರಿಯದಿಹುದೆ ವಿಕಲ್ಪ, ಸಂಕಲ್ಪ, ವಿಕಲ್ಪದಿಂದುಕ್ತವಾದುದು ಮನ, ಈ ಸಂಕಲ್ಪ ವಿಕಲ್ಪ ವನ್ನು ನಿಶ್ಚಯಿಸುವುದೇ ಬುದ್ಧಿ, ನಿಶ್ಚಯ ಮಾಡಿದುದನ್ನು ಪುನಃ ಪುನಃ ಚಿಂತಿಸುವುದೇ ಚಿತ್ತಾ. ಈ ಚಿಂತನದ ಅಭಿಮಾನಿಯಾಗಿ ಕರ್ತೃತ್ವ, ಭೋಕ್ತೃತ್ವವುಳ್ಳದ್ದಾಗುವುದೇ ಅಹಂಕಾರ ವಾಗಿದೆ. ಈ ನಾಲ್ಕು ಕರಣಂಗಳ ಕಾರ್ಯದಲ್ಲಿ ತಾದಾತ್ಮ್ಯಹೊಂದಿ ಇವುಗಳಲ್ಲಿ ಬಹುಪ್ರಿಯ ನಾಗಿಹ ಚೇತನವೆ ಜೀವನೆಂದು ಜ್ಞಾತೃವೆಂದು ಹೇಳಿಸಿಕೊಳ್ಳುವುದು.

ಈ ಕರಣಂಗಳ ಹಂಗು ಹರಿಯಬೇಕಾದರೆ, ಮೊದಲು ಇವುಗಳಿಂದ ಅಪಾಯ ಗಂಡಾಂತರ. ಇವುಗಳ ಸ್ಮರಣೆಯೆ ಮೃತ್ಯು. ಇವುಗಳು ನಿಜವೆಂದು ತಿಳಿದುದೆ ಭವ. ಇವುಗ ಳನ್ನು ಮರೆತಾದರೂ ಸ್ಮರಣೆಗೆ ತರಬಾರದು. ಇವುಗಳ ಕಾರ್ಯಕ್ಕೆ ಥೂ, ಛೀ ಹಾಕುವುದೇ ಕರಣಂಗಳ ಹಂಗ ಹರಿದುದು. ಕರಣಂಗಳ ಮುಖವನಳಿದು, ಕರಣಂಗಳ ಮುಖವನ ಳಿಯಬೇಕಾದರೆ, ಸಂಕಲ್ಪ ವಿಕಲ್ಪರೂಪಿ ಮನ ಒಂದು ಕೆಡಿಸಿದರೆ ಉಳಿದವುಗಳು ನಷ್ಟವಾಗು ವವು. ''ಎಲೆ ಮನವೆ ನಿನ್ನ ನಿಜವ ಹೇಳುವೆ ಕೇಳು. ನೀನು ಕೇವಲ ಜ್ಯೋತಿ ವರ್ಣಾತೀತ. ನೀನಿದನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತು. ಅದೀಗ ನಿನ್ನ ಪರಿಪೂರ್ಣತ್ವದ ನೆಲೆ'' ಎಂದು ಬೋಧಿಸಿ ತನ್ನ ನಿಜದಿರುವ ಹುಡುಕಲು ಹಚ್ಚಿದಾಗ ಅದು ನಿಜವ ಕಂಡು, ಸ್ವಯಂಜ್ಯೋತಿ ಲಿಂಗವಾಗಿಹ ತನ್ನಿರುವ ತನಗೆ ವಿದಿತವಾದಲ್ಲಿ ಮೊದಲು ಮನದ ಮುಖ ಕೆಟ್ಟಾಗ ಬುದ್ಧಿಗೆ ಸಂಕಲ್ಪ ವಿಕಲ್ಪಗಳೆ ಸಿಗದಿರುವಾಗ ಅದು ನಿಶ್ಚಿಯ ಮಾಡುವ ಕಾರ್ಯದಿಂದ ಹಿಂತಿರುಗುವುದು. ಇದರಂತೆ ಚಿಂತನ ಮಾಡುವ ಚಿತ್ತವು ತನ್ನ ಕಾರ್ಯದಿಂದ ಹಿಂತಿರುಗು ವವು. ಹೀಗೆ ಅಹಂಕಾರವು ತನ್ನ ಕಾರ್ಯವಾದ ಕರ್ತೃತ್ವ ಭೋಕ್ತೃತ್ವದಿಂದ ಹಿಂತಿರುಗಿ ಅಕರ್ತಾ ಅಭೋಕ್ತವುಳ್ಳದ್ದಾಗಿ ಜೀವನು ಇವುಗಳ ತಾದಾತ್ಮ್ಯದಿಂದ ಬಿಡುಗಡೆ. ತನ್ನ ನಿರಾ ಲಂಬ, ನಿರವಧಿಯ ಇರುವ ಕಾಣಲು ಆತುರ ಹೊಂದುವುದು. ಹೀಗೆ ಪರಿವರ್ತನೆ ಹೊಂದಿ ಶರಣರ ಪರಿಣಾಮದಲ್ಲಿ ಮುಕ್ತಿಯನರಿದೆನಯ್ಯ, ಶರಣರ ಪರಿಣಾಮವದು ನೋಡಿರೆ ? ''ಏನಕಂಡಡೇನಯ್ಯ, ತನ್ನ ಕಾಣದಾತ ಕುರುಡ, ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡ. ಏನ ಮಾತಾಡಿದಡೇನಯ್ಯ ತನ್ನ ಮಾತಾಡದಾತ ಮೂಕ, ದಿಟದಿಂದ ತನ್ನ ತಾ ಕಾಣ ಬೇತು. ದಿಟದಿಂದ ತನ್ನ ತಾ ಕೇಳಬೇಕು. ದಿಟದಿಂದ ತನ್ನ ತಾ ಮಾತಾಡಬೇಕು. ಇದೇ ನೆಲೆ, ಸ್ವಭೂಮಿ, ಸ್ವಸ್ವರೂಪ ಕಾಣಾ ಗುಹೇಶ್ವರಾ.''

**ಶರಣರ ಪರಿಣಾಮದಲ್ಲಿ ಮುಕ್ತಿಯನರಿದೆನಯ್ಯ :**

ಶರಣರ ಪರಿಣಾಮವದು ನೋಡಿರೆ ? ದಿಟದಿಂದ ತನ್ನ ತಾ ಕಾಣುವುದು ದಿಟ ದಿಂದ ತನ್ನ ತಾ ಕೇಳುವುದು. ದಿಟದಿಂದ ತನ್ನ ತಾ ಮಾತಾಡುವುದು. ಸಟೆ ಆವುದೆಂದು ತಿಳಿ ವುದು ? ದಿಟ ಆವುದೆಂದು ತಿಳಿವುದು ? ''ಕರಿಯನಿತ್ತಡೊಲ್ಲೆ, ಹಿರಿದಿಪ್ಪ ರಾಜ್ಯವನಿತ್ತ ಡೊಲ್ಲೆ, ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರ ಪದವಿಯನೊಲ್ಲೆ, ನಾನಾವ ಪದವಿಯನೊಲ್ಲೆ, ಶರಣರ ಸೂಳ್ನುಡಿ ಇತ್ತಡೆ ನಿಮ್ಮ ನಿತ್ತಂತೆ ಕಾಣಾ ರಾಮನಾಥ.'' ಸಟೆಯ ಹಗರಣ ನೋಡಿರೆ ? ಅದು ದೇವನಿಂದ ದೊರೆತ ಆನೆ ಇರಲಿ, ಅದು ಹಿರಿದಿಪ್ಪ ರಾಜ್ಯವಿ ರಲಿ, ಬ್ರಹ್ಮಪದ, ವಿಷ್ಣುಪದ, ರುದ್ರಪದ, ನಾನಾಪದವಿಯುಳ್ಳದಿದ್ದರೂ ಸಟೆಯು, ಸಟೆಯು

ಇದ್ದುದರಿಂದ ಅದನ್ನು ನಿರಾಕರಿಸಿ, ದಿಟವಾದ ಶರಣರ ಸೂಳ್ನುಡಿಯನ್ನು ಆಪೇಕ್ಷಿಸಿಹರು. ಶರಣರ ಸೂಳ್ನುಡಿಯ ನೋಡಿರೆ ? ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನಲ್ಲಿ ಅಲ್ಲದೆ ಮತ್ತೆಲ್ಲಿಯೂ ಇಲ್ಲ. ಬಯಲ ಹಿರಿಯರು, ಬಯಲನೆ ಅರಸುವರು. ಅಲ್ಲಿ ಉಂಟೆ ಹೇಳಾ ಗುಹೇಶ್ವರಾ, ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವ ತನ್ನಲ್ಲಿದ್ದುದು ಪ್ರಥಮಾಚಾರ್ಯನಾಗಿಹ ಬಸವನ ಕುರುಹ ಕಂಡು ಪ್ರಸನ್ನನಾದೆನಯ್ಯ.

***ಬಸವನ ಕುರುಹ ಕಂಡು ಪ್ರಸನ್ನೆಯಾದೆನಯ್ಯ :***

ಬಸವನ ಕುರುಹ ಅದು, ಅರಿಸಿಕೊಳ್ಳುವದಾಗದು. ಅರಿವ ದೃಕ್ಕಾಗದು, ಇವೆರಡು ಆವುದರಿಂದ ಸಿದ್ಧವಾಗುವವು. ಅಂತಪ್ಪ ಸ್ವತಃ ಸಿದ್ಧವಾದ ಅಖಂಡಿತರ ನಿಲುವು ತನ್ನಲ್ಲಿ ಅಲ್ಲದೆ ಮತ್ತೆಲ್ಲಿಯೂ ಇಲ್ಲ, ಇದು ಕಾರಣ ದಿಟವೆಂಬುದು ಖಂಡವಾಗಿಹ ಅರಿಸಿಕೊಳ್ಳುವ ಅನಾತ್ಮವೂ ಅಲ್ಲ. ಇತ್ತ ದೃಕ್‌ರೂಪಾಗಿಹ ಅರುವು ಅಖಂಡ. ಇದು ದಿಟವಲ್ಲ, ಇವೆರಡಕ್ಕೂ ಅರಿಯಲಿಲ್ಲದ ಅರುವಾಗಿಹುದು. ಇಂತಪ್ಪ ಪ್ರಸನ್ನ ಪರಿಣಾಮವಿಡಿದು ಆನು ಬದುಕಿದೆನಯ್ಯ ಸಂಗಯ್ಯ.

***ಪ್ರಸನ್ನ ಪರಿಣಾಮವಿಡಿದು, ಆನು ಬದುಕಿದೆನಯ್ಯ ಸಂಗಯ್ಯ :***

ಪ್ರಸನ್ನ ಪರಿಣಾಮವದು ಅರಿಯಲಿಲ್ಲದ ಅರುವು, ಅಂತಪ್ಪ ಮಹದರುವ ಹಿಡಿದು ಅಂದರೆ ಸ್ವೀಕರಿಸಿ ಅರಿಯಲಿಲ್ಲ, ಮರೆಯಲಿಲ್ಲ, ಅರಿವ ಅರುಹಿಸಿಕೊಂಬ ಈ ಉಭಯವ ಅರಿಯಲಿಲ್ಲ, ನನ್ನ ಅಖಂಡಿತನ ನಿಲುವು. ನನ್ನಲ್ಲಿಯೆ ಕಂಡು ರೂಹಿಸಲಿಲ್ಲ, ರೂಹಿಸಲಿಲ್ಲಾಗಿ ಭಾವಿಸಲಿಲ್ಲ, ಭಾವಿಸಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯಲಿಲ್ಲದ ಅರುವೆ ತಾನಾಗಿ ಮರೆಯಲಿಲ್ಲ. ಮರೆಯಲಿಲ್ಲವಾದ್ದರಿಂದ ಆನು ಬದುಕಿದೆನಯ್ಯ. ಅಮರನಾದೆನಯ್ಯ ದಿಟದಿಂದ ನನ್ನ ನಾನು ಕಂಡೆ. ದಿಟದಿಂದ ನನ್ನ ಕೇಳಿದೆ. ನನ್ನ ನಾ ಮಾತಾಡಿದುದರಿಂದ ಆನು ಬದುಕಿದೆನಯ್ಯ ಸಂಗಯ್ಯ ಎಂದು ಹೇಳಿಹಳು.

# ಕತ್ತಲು ಬೆಳಗು ಕಾನದ ನಿರಂತರ ಜ್ಯೋತಿ

**ಆ ನೆತ್ತಲೀ ಸಂಸಾರವೆತ್ತ !**
**ಆನೆತ್ತಲೀ ಕಾಯವೆತ್ತ !**
**ಆ ನೆತ್ತಲೀ ನಿಜ ಮಹತ್ವವೆತ್ತ !**
**ಸಂಗಯ್ಯನೆತ್ತ ! ಬಸವನೆತ್ತ ಆ ನೆತ್ತ !**

***ತಾತ್ಪರ್ಯ : ಆನೆತ್ತ ಲೀ ಸಂಸಾರವೆತ್ತ :***

ಆನೆತ್ತ ! ಈ ಸಂಸಾರವೆತ್ತ, ಬೆಳಕೆತ್ತ, ಕತ್ತಲೆ ಎತ್ತ ! ಅವಿನಾಶಿ ಎತ್ತ, ನಾಶವೆತ್ತ, ನಿರೂಪವೆತ್ತ, ರೂಪವೆತ್ತ, ನಾಮವೆತ್ತ, ನಿರ್ನಾಮವೆತ್ತ, ಭಯವೆತ್ತ, ನಿರ್ಭಯವೆತ್ತ, ನಿರ್ನಾಮನಾಗಿಹ ಆನೆತ್ತ, ನಾಮರೂಪಿ ತೋರುವ ವಿಕಾರವೆತ್ತ, ಅಜಾತನಾಗಿಹ ಆನೆತ್ತ, ಹುಟ್ಟು ಸಾವುಳ್ಳ ತೊಳಲುವ ಬಳಲುವ ಸಂಸಾರವೆತ್ತ, ಸುಖದ ಸುಖವಾಗಿಹ ಆನೆತ್ತ.

ಸಾಕಾರ ನಿರಾಕಾರವೆಂಬೆರಡು ಸ್ವರೂಪಂಗಳು, ಒಂದು ಆಹ್ವಾನ, ಒಂದು ವಿಸರ್ಜನೆ. ಒಂದು ವ್ಯಾಕುಲ, ಇನ್ನೊಂದು ನಿರಾಕುಳ, ಉಭಯ ಕುಳ ರಹಿತ ಗುಹೇಶ್ವರಾ ನಿಮ್ಮ ಶರಣ

ನಿಶ್ಚಿಂತ. ನಿರ್ನಾಮ ನಿರೂಪನಾಗಿಹ ಆನೆತ್ತ. ನಾಮರೂಪಗಳಿಂದುಕ್ತವಾಗಿ ತೋರುವ ಷಡ್ವಿಕಾರವಾಗಿಹ ತನುವೆತ್ತ, ಅಕರ್ತಾ, ಅಬೋಕ್ತಾನಾಗಿಹ ಆನೆತ್ತ, ಕರ್ತೃತ್ವ, ಭೋಕ್ತೃತ್ವಗಳಿಗೀಡಾಗಿ ನರಳುವ ಅರಸುವ ಆಲಾಪಿಸುವ ಭಯ ಚಿಂತೆ ಸಂತಾಪಗಳಿಂದುಕ್ತವಾದ ಸಂಸಾರವೆತ್ತ, ಅತೀಂದ್ರಿಯನಾಗಿಹ, ಆನೆತ್ತ ! ಇಂದ್ರಿಯಂಗಳು ವಿಷಯಂಗಳ ಸಂಯೋಗದಿಂದುಕ್ತವಾಗಿ ಶುಭಾಶುಭ ಕ್ರಿಯಂಗಳ ಫಲರೂಪವಾದ ರಾಗದ್ವೇಷರೂಪಿ ಸಂಸಾರವೆತ್ತ, ಸಮತೆಯೆನನ್ನಿರುವಾಗಿಹ ಸ್ವಯಂಪ್ರಕಾಶವಾಗಿಹ ಆನೆತ್ತ, ವಿಷಮ ರೂಪಿ ಲಾಭ ಹಾನಿಯಿಂದುಕ್ತವಾದ ಸಂಸಾರವೆತ್ತ, ಮಾನಾಪಮಾನ ಕಾಣದ ನನ್ನ ಚಿದಂಗವೆತ್ತ !, ಮಾನಾಪಮಾನವೆ ಪ್ರಧಾನವಾಗಿ ಭಯಕಂಪನದಿಂದುಕ್ತವಾದ ಸಂಸಾರವೆತ್ತ, ನಿರಾಕುಳನಾಗಿಹ ನಾನೆತ್ತ ! ವ್ಯಾಕುಲವಾಗಿಹ ಸಂಸಾರವೆತ್ತ ! ತೋರಿ ಕೆಡುವ ಸಂಸಾರವೆತ್ತ ! ತೋರಬಾರದ ಘನವಾಗಿಹ ಆನೆತ್ತ.

***ಆನೆತ್ತ ಲೀ ಕಾಯವೆತ್ತ*** :

ಆನೆತ್ತ, ಈ ಕಾಯವೆತ್ತ, ಮರುವಿನಿಂದುಕ್ತವಾದ ಅಹಂಕಾರಕ್ಕೆ ಆನೆನ್ನಬೇಕೆ ? ಇತ್ತ ಅರುವಿನಿಂದುಕ್ತವಾದ ಚಿದಹಮ್ಮಿಗೆ ನಾನೆನ್ನ ಬೇಕೆ ? ಕಾರಣ, ಅಹಂಕಾರದಿಂದುಕ್ತವಾದ ಈ ಕಾಯವೆತ್ತ ? ಅಹಮಿಲ್ಲದ ಚಿದ್ಘನನಾದ ಆನೆತ್ತ, ತೋರುವ ಷಡ್ವಿಕಾರವುಳ್ಳ ಈ ಕಾಯವೆತ್ತ, ನುಡಿಗೆಡೆಗೊಡದ ಘನನಾಗಿಹ ಆನೆತ್ತ, ಕಲ್ಪಿತಕ್ಕೆ ಒಪ್ಪಿದ ಕಾಯವೆತ್ತ, ಕಲ್ಪನಾರಹಿತನಾಗಿಹ ಆನೆತ್ತ, ಗುರುವಿಂಗೆ ಗುರುವಾಗಿಹ ಆನೆತ್ತ, ಗುರುಶಿಷ್ಯರೆಂಬ ಪ್ರತಿಭಾವವುಳ್ಳ ಕಾಯವೆತ್ತ, ಭಾವಕ್ಕೆ ಒಪ್ಪಿದ ಭ್ರಮರೂಪಿ ಕಾಯವೆತ್ತ ! ಭಾವಸೂತಕವಳಿದು, ಬ್ರಹ್ಮನೆಮ್ಮಗೆ ಯಂತಿಳಿದು ಮನ ವಿಶ್ರಾಂತಿಯ ನೆಯ್ದ ಆನೆತ್ತ, ಆನೆಂಬುದೆತ್ತ ! ಆನು ನೀನೆಂಬುದಳಿದು ತೆರಹಿಲ್ಲದ ಘನವಾಗಿಹ ಆನೆತ್ತ ಉದಯಾಸ್ತದಿಂದುಕ್ತವಾದ ಕಾಯವೆತ್ತ, ಉದಯಾಸ್ತ ಕಾಣದ ನಿತ್ಯನಿರಂಜನ ತಾನಾದ ಸ್ವಯಂಜ್ಯೋತಿ ಎತ್ತ !

***ಆನೆತ್ತ ಲೀ ನಿಜ ಮಹತ್ವವೆತ್ತ*** :

ಸಂಜ್ಞೆಯ ನಿಜವಾಗಿಹ ಗುರುಕರುಣೆ ಎತ್ತ ! ಸಕಲರ ಹೃದಯದಲ್ಲಿ ನ್ಯಸ್ತವಾಗಿಹ ಗುರುಲಿಂಗದುದಯ ರೂಪಿ ಆನೆತ್ತ, ಹೆತ್ತರಿವು ಎತ್ತ, ನಿಜದಿರುವಾಗಿಹ ಆನೆತ್ತ, ನಿಜ ನಿಜವೆಂದು ಹಲಬುವ ನಿಜವೆತ್ತ. ನಿಜವೆನ್ನದೆ ನಿಜವಾಗಿಹ ಘನವೆತ್ತ ! ನುಡಿಯಿಂದುಕ್ತವಾದ ನಿಜಮಹತ್ವವೆತ್ತ, ನುಡಿಗೆ ಅವಕಾಶಕೊಡದ ಎಲ್ಲೆಲ್ಲೂ ತುಂಬಿದ ಆನೆತ್ತ! ಆನೆಂಬುವ ಆನೆತ್ತ, ಆನೆನ್ನದ ಶಬ್ದಮುಗ್ಧವಾಗಿಹ ತನ್ನಿರುವ ಕಂಡ ಆನೆತ್ತ, ಮಾತಿಲ್ಲದವನಾಗಿಹ ಆನೆತ್ತ, ಮಾತಿನಿಂದುಕ್ತವಾಗಿಹ ನಿಜ ಮಹತ್ವವೆತ್ತ.

***ಸಂಗಯ್ಯವೆತ್ತ, ಬಸವನೆತ್ತ, ಆನೆತ್ತ*** :

ಹೊರದೃಷ್ಟಿಗೆ ಕಪ್ಪಡದಲ್ಲಿ ನೆಲಸಿದ ಸಂಗಯ್ಯನೆತ್ತ, ಸಂಗಯ್ಯನಾಗಿ ಪೂಜಿಸಿಕೊಂಡ ಸಂಗಮ ದೇವನೆತ್ತ, ಇತ್ತ ಭಕ್ತನಾಗಿ ಪೂಜಿಸಿದ ಭಕ್ತನೆಂಬ ಬಸವನೆತ್ತ ! ನಿಜದೃಷ್ಟಿಗೆ ತೆರಹಿಲ್ಲದ ಲಿಂಗ ಭರಿತನಾಗಿಹ ಸಂಗಯ್ಯನೆತ್ತ ಇತ್ತ ಬಸವಯ್ಯ ಘನಗಂಭೀರ ಸಂಗಯ್ಯನ ಅರಿಯಹೋಗಿ ಘನಕ್ಕೆ ಘನನಾದುದೆತ್ತ, ಇದಲ್ಲದೆ ಕೂಡಲ ಸಂಗಯ್ಯನೆಂಬ ಬೆಳಗಿಂಗೆ ಬೆಳಗಾಗಿ ಶಬ್ದಮುಗ್ಧನಾ ಬಸವಯ್ಯನೆತ್ತ, ಇತ್ತ ಬಸವಯ್ಯನ ಹೆಂಡತಿಯಾದ ನಾನೆತ್ತ, ಇದಲ್ಲದೆ ಅಂತಪ್ಪ ಘನಕ್ಕೆ ಘನನಾದ ಬಸವಂಗೆ ಶಿಶುವಾದುದೆತ್ತ, ಬಸವನೆನಗೆ ಶಿಶುವಾದುದೆತ್ತ, ಪ್ರಮಥರು, ಪುರಾತನರು, ಸಾಕ್ಷಿಯಾಗಿ ಸಂಗಯ್ಯನಿಕ್ಕಿದ ದಿಬ್ಯವ ಮೀರಿದೆ ಬಸವನೊಳಗಾನಡಗಿದೆ. ಸಂಗ

ಯ್ಯನೆತ್ತ, ತೆರಹಿಲ್ಲದ ಘನಲಿಂಗವಾಗಿಹ ಸಂಗಯ್ಯನೆತ್ತ, ಸಂಗ ತೆರಹಿಲ್ಲದ ಲಿಂಗಭರಿತವಾದುದು ಅರಿಯ ಹೋಗಿ ನಿರ್ನಾಮ ಮಾಡಿದ ಬಸವಯ್ಯನೆತ್ತ, ಇಂತಪ್ಪ ನಿರ್ನಾಮ ಮಾಡಿದ ಬಸವರಸರೊಳಗಡಗಿದ ನಾನೆತ್ತ ಎಂದು ಹೇಳಿಹಳು.

# ಬಸವನಿಗೆ ಶಿಶುವಾದ ನೀಲಮ್ಮ

**ಧ್ವನಿಯ ತೋರಲು,**
**ಆ ಧ್ವನಿಯ ಮರೆಯಲ್ಲಿ ಹುಟ್ಟದಮದ್ದುಗ್ಗುರು,**
**ಬಸವಣ್ಣಂಗೆ ಶಿವಸುಖವಾಯಿತ್ತು ಬಸವಾ.**
**ಆ ಧ್ವನಿಯಡಗಿ ಅಪ್ರತಿಮ ಸಂಗ,**
**ನಿರ್ಮಲಾಕಾರವಾಯಿತ್ತಯ್ಯ ಎನಗೆ,**
**ಪ್ರಣವ ಸ್ವರೂಪ ಬಸವನ ಕಂಡ ಬಳಿಕ**
**ಆನು ಬಸವನ ಶಿಶುವಾದೆನಯ್ಯ ಸಂಗಯ್ಯ**

**ತಾತ್ಪರ್ಯ : *ಧ್ವನಿಯ ತೋರಲು, ಆ ಧ್ವನಿಯ ಮರೆಯಲ್ಲಿ ಹುಟ್ಟದ ಮದ್ದುಗ್ಗುರು ಬಸವಣ್ಣಂಗೆ ಶಿವಸುಖವಾಯಿತ್ತು ಬಸವಾ* :**

ಧ್ವನಿಯ ತೋರಲು ? ಆದಾವ ಧ್ವನಿ ತೋರಲು, ಪರತತ್ವ ಬಲ್ಲ ಧ್ವನಿ ನಿಜವರಿತವರ ಧ್ವನಿ, ನಾನೀನೆಂಬುದಕ್ಕವಕಾಶ ಕೊಡದ ಧ್ವನಿ, ಕೊನೆ ಮೊದಲಿಲ್ಲದ ಧ್ವನಿ, ಅದು ಅಪಾರ ಧ್ವನಿ, ಇದು ಮಧ್ಯಸ್ಥ ಧ್ವನಿ, ಇದು ಗುರುವಂಚನೆ ಆಗದ ಧ್ವನಿ, ಶಿಷ್ಯರ ಮಾಡದ ಧ್ವನಿ, ಎರಡಿಲ್ಲದ ಧ್ವನಿ ಎರಡೊಂದಾದ ಧ್ವನಿ.

ಆಶ್ಚರ್ಯ, ಮಹದಾಶ್ಚರ್ಯ ನೋಡಲು ಧ್ವನಿ ! ಧ್ವನಿ ಎಂಬೆನೆ, ತನ್ನ ಧ್ವನಿ, ಈ ಧ್ವನಿಯ ಮರೆಯಲ್ಲಿ ಅಜಾತ ಲಿಂಗ, ಗುರುಲಿಂಗವಾಗಿಹ ಪ್ರಥಮಾಚಾರ್ಯ ಬಸವಣ್ಣ ಅಲ್ಲಿ ಅಭೇದ್ಯ ಶಿವ. ಇಂತಪ್ಪ ಮಹದರಿವು ಅಜಾತ ಮದ್ದುಗ್ಗುರು ಬಸವಣ್ಣಂಗೆ ಶಿವಸುಖವಾಯಿತ್ತು. ಇದೆಂಥ ಕರುಣೆಯ ಕರುಣಾರಸದ ಧ್ವನಿ.

''ಕೆರೆ-ಹಳ್ಳ-ಭಾವಿಗಳು ಮೈದೆಗದಡೆ ಗುಳ್ಳೆಗೊರಚೆ ಕಾಣಬಹುದು. ವಾರಿಧಿ, ಮೈದೆಗದರೆ ರತ್ನಂಗಳ ಕಾಣಬಹುದು. ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.'' ಎಂದಂತೆ ಈ ಧ್ವನಿಯ ತೋರಿದುದು ಶರಣರು ಮನದೆರೆದು ಮಾತನಾಡಿದರೆ ಅರು ಹೃದಯವರಳಿ ಅರುವಿನರುವಾಗಿಹ ಧ್ವನಿ ತೋರಲು, ಇದು ಅಖಂಡ ಧ್ವನಿ, ಏಕ ರಸವಾಗಿಹ ಧ್ವನಿ. ಇದುವೆ ತೆರಹಿಲ್ಲದ ಲಿಂಗಭರಿತವೆಂಬ ಧ್ವನಿ, ಅರಿಯಬಾರದ ಘನವೆಂಬ ಧ್ವನಿ. ಓಂ ಎಂಬ ಪ್ರಣವ ಧ್ವನಿ. ಮಾತಿಲ್ಲದವನೆಂಬ ಧ್ವನಿ, ಅರಿಯಲಿಲ್ಲದ ಅರುವೆಂಬ ಧ್ವನಿ. ಇದರ ಮರೆಯಲ್ಲಿ ಹುಟ್ಟದ ಮಡ್ಡುಗ್ಗುರು ಇದುವೆ ಗುರುವಿಂಗೆ ಗುರುವಾಗಿಹ ಗುರುಲಿಂಗ. ಗುರು ಪ್ರಸಾದ ಕೊಂಡವರ ಇರವು ಭಾಷೆ ಪ್ರಸಾದ ಇಕ್ಕದವರ ಇರವು. ನಿಃಶಬ್ದವೇದಿಗಳ ಇರವು. ಇದು ಸಕಲರ ಅಂತರಂಗದ ಮರೆಯಲ್ಲಿದ್ದ ನಿಕ್ಷೇಪ.

ಇದು ಅಂತರಂಗ ಬಹಿರಂಗವೆಂಬುದು ಕೆಟ್ಟವರ ನಿಜ ನಿಕ್ಷೇಪ. ಅಂತರಂಗವೆಲ್ಲ ಅರುವಾಗಿ ಬಹಿರಂಗವೆಲ್ಲ ಲಿಂಗವಾಗಿದ್ದಲ್ಲಿ ಹುಟ್ಟದ ಮದ್ಗುರು ಬಸವಣ್ಣಂಗೆ ಶಿವಸುಖವಾಯಿತ್ತು ಬಸವಾ ಎಂದು ಬಸವರಸ ಹಿರಿಮೆಯ ಎತ್ತಿ ತೋರಿಹಳು.

***ಆ ಧ್ವನಿಯಡಗಿ ಅಪ್ರತಿಮ ಸಂಗ ನಿರ್ಮಲಾಕಾರವಾಯಿತ್ತಯ್ಯ ಎನಗೆ :***

ಓಹೋ ? ನೀಲಾಂಬಿಕೆಯ ಸಾಹಸ. ಆ ಧ್ವನಿಯ ಅಡಗಿಸಿಹಳೆ ? ನಷ್ಟ ಮಾಡಿದಳೆ ? ತೆರಹಿಲ್ಲದ ಲಿಂಗ ಭರಿತವೆಂಬ ಧ್ವನಿ ಅಡಗಿಸಿಹಳೆ ? ಅರಿಯಬಾರದ ಘನವೆಂಬ ಧ್ವನಿ ಅಡಗಿಸಿಹಳೆ ? ಓಂ ಎಂಬ ಪ್ರಣವ ಧ್ವನಿ ಅಡಗಿಸಿಹಳೆ, ಅರಿಯಲಿಲ್ಲದ ಅರುವೆಂಬ ಧ್ವನಿಯ ಅಡಗಿಸಿಹಳೆ ? ಶಬ್ದ ನಷ್ಟ ಮಾಡಿಹಳೆ ? ನಾಮ ನಿರ್ನಾಮ ಮಾಡಿಹಳೆ ? ನಿಶಬ್ದಲಿಂಗಾನುಭವಿಯಾದಳೆ ? ಅಪ್ರತಿಮ ಸಂಗ, ಪ್ರತಿಯಿಲ್ಲದ ಸಂಗ, ಪ್ರತಿಮೆ ಇಲ್ಲದ ಸಂಗ, ಅಸಂಗವೆನ್ನಲು ಬಾರದವನ ಸಂಗ, ಮಾತಿಲ್ಲದವನ ಸಂಗ, ಇಂತಪ್ಪ ಸ್ವಯಲಿಂಗದ ಸಂಗ ತನ್ನ ಸಂದ ತನ್ನದಾಗಿ ನಿರ್ಮಲಾಕಾರವಾಯಿತ್ತು ಎನಗೆ, ಇದು ಮಾತಿಲ್ಲದ ಮಥನವಾದಲ್ಲಿ ತನ್ನಿಂದ ತನಗೆ ವಿದಿತವಾದ ನಿರ್ಮಲಾಕಾರವಾಯಿತ್ತು. ತನ್ನಯ ಸುಖಾಕಾರವಾಯಿತ್ತು ಸುಖದ ಸುಖವಾಗಿಹ ಸುಖಾಕಾರವಾಯಿತ್ತು ಎನಗೆ ಎಂದು ಹೇಳಿಹಳು.

***ಪ್ರಣವ ಸ್ವರೂಪ ಬಸವನ ಕಂಡ ಬಳಿಕ ಆನು ಬಸವನ ಶಿಶುವಾದೆನಯ್ಯ ಸಂಗಯ್ಯ:***

ಪ್ರಣವ ಸ್ವರೂಪನ ಕಂಡು ಪ್ರಣವ ಸ್ವರೂಪವಾದವರು ಶರಣರು ಶರಣೆಯರು. ಬಹುಸಾಧಕರು ಪ್ರಣವ (ಓಂ) ಎಂದು ಉಚ್ಚರಿಸುವುದೇ ಪ್ರಣವ ಸ್ವರೂಪ ಎಂದು ತಿಳಿದಿಹರು. ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರು ಪ್ರಣವದರ್ಥವ ತಿಳಿದು ನೋಡಿರೆ ? ಪ್ರಣವ ನಾಹಂ ಎಂದುದೆ ? ಪ್ರಣವ ಕೋಹಂ ಎಂದುದೆ ? ಪ್ರಣವ ಸೋಹಂ ಎಂದುದೆ ? ಪ್ರಣವ ಚಿದಹಂ ಎಂದುದೆ ? ಎನ್ನದಾಗಿ ಪ್ರಣವದರ್ಥವು ತಿಳಿವುಡೆ ತಾನೆ ಮಯವು ಗುಹೇಶ್ವರ ಇತ್ತ.

ಅಂಬಿಗರ ಚೌಡಯ್ಯ, ಪ್ರಾಣ ಪ್ರಣವವೆಂಬರು. ಪ್ರಾಣಕ್ಕೂ ಪ್ರಣವಕ್ಕೂ ಏನು ಸಂಬಂಧ. ಪ್ರಾಣವು ಪ್ರಳಯಕ್ಕೊಳಗಾಗಿ ತಿರುತಿರುಗಿ ಬರುವದಕ್ಕೊಡಲಾಯಿತ್ತು. ಪ್ರಣವವೆ ಪ್ರಸನ್ನವಾಗಿದ್ದುದೆಂದು ನಂಬಿಗಚೌಡಯ್ಯ. ಪ್ರಣವ ಸ್ವರೂಪ ಬಸವಕಂಡ ಬಳಿಕ, ಪ್ರಣವ ಸ್ವರೂಪ ಬಸವ, ಪ್ರಣವ ಸ್ವರೂಪ ತಿಳಿದವರು ಬಸವನಕಂಡವರು. ಬಸವ ಓಂಕಾರದರ್ಥ ಜ್ಞಾನಸ್ವರೂಪನು ಅಲ್ಲ, ಬಸವರಸರು ಓಂಕಾರದ ಉಚ್ಚಾರಕ್ಕೂ, ಇತ್ತ ಅರ್ಥರೂಪವಾದ ಜ್ಞಾನಸ್ವರೂಪಕ್ಕೂ ಸಮಸ್ವರೂಪ ಬಸವ. ನಿರುಪಮ ಬಸವ, ಆರು ಸಮಸ್ವರೂಪವಾಗಿಹ ಅಬೇದ್ಯ ಸತ್ಯವಾದುದೆ ಬಸವನ ಇರುವು. ಇಂತಪ್ಪ ಅಭೇದ್ಯ ಸತ್ಯ ತಾನಾಗಿಹ ಬಸವನ ಶಿಶುವಾದೆನಯ್ಯ. ಬಸವನ ಹೃದಯದಿಂದ ಹೊರಬಂದ ಶಿಶುವಾದೆನಯ್ಯ ಸಂಗಯ್ಯ ಎಂದು ಹೇಳಿಹಳು.

**ಇತಿ ಸಮಾಪ್ತಿ ಮಸ್ತು**

## ವಚನಾನುಕ್ರಮಣಿಕೆ


| ವಚನ | ಸಂ |
|---|---|
| ಅಂಗ ಸಂಗಿಗನಲ್ಲ ನಮ್ಮ ಬಸವಯ್ಯನು. | 1 |
| ಅಂಡಜವಳಿದ ಬಸವ, ಪಿಂಡಜವಳಿದ ಬಸವಾ | 2 |
| ಅನುಭಾವದ ಸಾರವೆ, ನಿಜಸಾರವಾಗಿ ನಿಂದನೆಮ್ಮ ಬಸವಯ್ಯನು. | 3 |
| ಅಪ್ರಮಾಣದ ತ್ರಾಣದಲ್ಲಿ | 4 |
| ಅಮೃತ ಡೋವಿಗೆಯೊಳಗೆ ಅಮೃತ ಡೋವಿಗೆ | 5 |
| ಅರಿಯದ ಶಬ್ದವ ಕುರುಹಿಂಗೆ ತಂದ ಬಸವಯ್ಯನು | 6 |
| ಅರುವೆರಳುದ್ದದ ದೇಹವ ಮಾಡಿದೆ ಕರುಣಿ ಬಸವಾ, | 7 |
| ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಯ್ಯ, | 23 |
| ಅಧಿಕ ತೇಜೋನ್ಮಯ ಬಸವಾ | 26 |
| ಅಲ್ಲಲ್ಲಿಯ ಸುಖಂಭೋ ಎನ್ನಲಿಲ್ಲ. | 46 |
| ಆಡಲಿಲ್ಲವಯ್ಯ ನಾನು ಹೆಣ್ಣು ರೂಪಧರಿಸಿ, | 47 |
| ಆ ನೆತ್ತಲೀ ಸಂಸಾರವೆತ್ತ ! | 48 |
| ಆ ನೆತ್ತಲೀ ಸಂಸಾರವೆತ್ತ ! | 50 |
| ಆದಿ, ಅನಾದಿ ತತ್ವವ ಭೇದಿಸಿ ಕೊಟ್ಟ ಗುರುವೆ, | 24 |
| ಇಪ್ಪೆಯ ಹೂವ ನನುಗೊಳಿಸಲು ಇಪ್ಪೆ ಹಿಪ್ಪೆಯಾಯಿತ್ತು | 27 |
| ಎನಗಿನ್ನೇನು, ಎಮ್ಮಯ್ಯ ನೈಕ್ಯವ ನೈದಿದ ಬಳಿಕ | 28 |
| ಎನಗೆ ಲಿಂಗವು ನೀವೆ ಬಸವಯ್ಯ | 8 |
| ಎರಡಿಲ್ಲದ ವಸ್ತುವೆ ನೀ ನೆರಡಾದೆಯಲ್ಲ ಬಸವಯ್ಯ | 9 |
| ಏಕ ಏವ ದೇವನೊಬ್ಬನೆ ಶರಣ ಬಸವಯ್ಯ | 10 |
| ಏತರಲ್ಲಿಯೂ ಹೆಸರಿಲ್ಲದ ಕುರುಹು ಈ ವಸ್ತು ಬಸವಯ್ಯನು | 11 |
| ಏಹೆ ! ಎಲೆ ಅಭವ ಬಸವಾ | 12 |
| ಎನಗಿನ್ನೇನು ಎನಗಿನ್ನೇನು ಎನಗಿನ್ನೇನು ಎನಲೇನು ಕಾರಣ ಬಸವಾ, | 31 |
| ಎಲೆ ಅಯ್ಯಗಳಿರಾ, ಎಲೆಗಳೆದ ವೃಕ್ಷವ ಕಂಡಿರೆ ಬಸವನ | 32 |
| ಎಲೆ ಅಯ್ಯ ಬಸವಾ | 33 |
| ಎಲೆಗಳೆದ ಮರದಲ್ಲಿ ನೆಳಲ ನರಸಲಿಲ್ಲ, | 34 |
| ಎಲೆ ಶರಣರಿರಾ ಎಲೆ ಭಕ್ತರಿರಾ | 35 |
| ಐಕ್ಯವ ತೋರಿ ಅಜಾತನಲ್ಲಿ ಅಡಗಿದ ಬಸವಾ, | 36 |
| ಕಲ್ಯಾಣವಿಲ್ಲ, ಕೈಲಾಸವಿಲ್ಲ ಬಸವಾ, | 37 |
| ಕಲ್ಲ ಮಾಲೆಯ ಕಡಿದಾತ ಬಸವಯ್ಯನು | 38 |
| ಕಾಮಿತ ಸುಖವ ಕಂಗೊಳಿಸಿದ ಗುರುವೆ | 39 |
| ಕರಣಂಗಳ ಹಂಗ ಹರಿದು, ಕರಣಂಗಳ ಮುಖವನಳಿದು | 49 |
| ಗಮನ ಸುಖವಡಗಿ, ನಿರ್ಗಮನವಾಯಿತ್ತು ಬಸವಾ | 40 |

ತತ್ವದ ಹಂಗೇನೊ ಶರಣ ಬಸವಂಗೆ? 13
ತನುವಾವುದಯ್ಯ ಬಸವಾ, 30
ತ್ರಿವಿಧದ ಮಾಟವಿಲ್ಲವೆನಗೆ ಬಸವಾ 41
ಧ್ವನಿಯ ತೋರಲು, 51
ನಮ್ಮ ಹಂಗಿಗನಲ್ಲ ಬಸವಯ್ಯನು. 14
ನಿರೋಧವಳಿದು ನಿರಾಕಾರವಾಯಿತ್ತು ಬಸವಾ 29
ನಮಗಾರ ಸಂಗವಿಲ್ಲ, ನಮಗಾರ ಸಂಗವಿಲ್ಲ, 42
ನೆಲೆಯಿಲ್ಲದ ಜಲವ ಹೊಕ್ಕಡೆ 45
ಪ್ರಣವದ ಹೆಸರಿಲ್ಲ ಬಸವಂಗೆ 15
ಭಕ್ತಿ ಪ್ರಸಾದ, ಮುಕ್ತಿ ಪ್ರಸಾದ 16
ಮನವಿಲ್ಲ ಬಸವಂಗೆ, ತನುವಿಲ್ಲ ಬಸವಯ್ಯಂಗೆ 17
ಮಾಟ ಕೂಟ ಸಮಯಾಚಾರ ಸದ್ಭಕ್ತಿಯ 18
ಮಾಟವಿಲ್ಲದ ಸಮಯಾಚಾರವ ಮಾಡ ಹೋದೆ ಬಸವಾ, 19
ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ 20
ಮುನ್ನಲೊಂದು ಶಿಶು ಹುಟ್ಟಿತ್ತು 21
ಮಾತಿಲ್ಲದೆ ಮಥನವ ಮಾಡಿ ಮೆರೆದೆ ಬಸವಾ 25
ಮಾತಿಲ್ಲವೆನಗೆ ಆ ಮಾತು ನುಡಿಯಲಿಲ್ಲವೆನಗೆ, 43
ಮುಗಿಸಿದೆ ಮುಗಿಸಿದೆ ಮನದಲ್ಲಿ ನಾನು ಬಸವಾ. 44
ಲಕ್ಷದ ಮೇಲೆ ತೊಂಭತ್ತಾರು ಸಾವಿರ 22



## ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು

ದ್ವೈತ, ದ್ವೈತಾದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಿವಶಕ್ತಿ ವಿಶಿಷ್ಟಾದ್ವೈತ, ಮುಂತಾದ ಸಿದ್ಧಾಂತಗಳು ಭಾರತದಲ್ಲಿ ಪ್ರಚಲಿತದಲ್ಲಿವೆ. ಪ್ರತಿ ದೇಹದಲ್ಲಿರುವ ಶಕ್ತಿಯನ್ನು ಆಯಾ ದೇಹವೇ ಬಳಕೆ ಮಾಡಿಕೊಳ್ಳಲು ಸಕಲ ದೇಹಗಳಿಗೆ ನೆರವಾಗಲೆಂದು ಆಯಾ ಸಿದ್ಧಾಂತಗಳನ್ನು ಮಹಾಜ್ಞಾನಿಗಳು ರಚಿಸಿರುವರು. ಆದರೆ ಜನ ಆಯಾ ಗ್ರಂಥಗಳನ್ನು ಬರೆದ ಜ್ಞಾನಿಗಳನ್ನು ಅವರು ಬರೆದ ಸೂತ್ರಪ್ರಧಾನವಾದ ಜ್ಞಾನ ಗ್ರಂಥಗಳನ್ನು ಮಾತ್ರ ವಿಶ್ವಾಸಕ್ಕೆ ತೆಗೆದುಕೊಂಡರು. ತಮ್ಮ ತಮ್ಮ ದೇಹಗಳಲ್ಲಿ ತನ್ಮಯವಾದ ಅರಿವಿನ ಶಕ್ತಿಯನ್ನೆ ಮರೆತರು. ಒಬ್ಬೊಬ್ಬ ಜ್ಞಾನಿಯ ಹೆಸರಲ್ಲಿ ಮತ ಧರ್ಮ ನಿರ್ಮಾಣವಾಯಿತು. ಜಾತಿ ಉಪಜಾತಿ ಪಂಗಡಗಳು ಹುಟ್ಟಿಕೊಂಡವು. ಜ್ಞಾನಿಗಳು ಬರೆದ ಸೂತ್ರ ಪ್ರಧಾನ ಸಿದ್ಧಾಂತಗಳೆಲ್ಲಾ ಧರ್ಮಗ್ರಂಥಗಳಾದವು. ಅವು ಪೂಜೆಗೆ, ವಾದ ವಿವಾದಗಳಿಗೆ ಉಪನ್ಯಾಸಕ್ಕೆ ಮೀಸಲಾದವು.

ದೇಹದ ಉನ್ನತಿಗಾಗಿ ದೇಹದಿಂದಲೇ ಬರೆದ ಗ್ರಂಥಗಳು ದೇಹಗಳಿಗೆ ಮುಳುವಾದವು. ಈ ಸಕಲ ಸಿದ್ಧಾಂತಗಳಿಂದ ಆದ ಬದಲಾವಣೆಯನ್ನು ಶ್ರೀ ವಿದ್ಯಾನಂದ ಶರಣರು ಗಮನದಲ್ಲಿಟ್ಟುಕೊಂಡು ಶರಣರ ವಚನಗಳನ್ನು ತೆಗೆದುಕೊಂಡು ಅವುಗಳಿಗೆ ತಮ್ಮದೆ ಆದ ಸೂತ್ರ ರೂಪದ ವ್ಯಾಖ್ಯಾನವನ್ನು ಬರೆದರು. ಇವು ಮನುಕುಲವನ್ನು ಮಹಾ ಮನುಕುಲದತ್ತ ತೆಗೆದುಕೊಂಡು ಹೋಗುವುದರಲ್ಲಿ ಸಂದೇಹವೇ ಇಲ್ಲ.

ಸದ್ಗುರು ವಿದ್ಯಾನಂದರು ಈ ನಾಡು ಕಂಡ ಮಹಾನ್ ಸಂತರು. ಮಠ ಮಾನ್ಯಗಳ ಒಡೆಯರು ಸಾಹಿತಿಗಳು ಈ ಸತ್ಪುರುಷರನ್ನು ನೋಡಲು ಬರಲಿಲ್ಲ. ರಾಜಕಾರಣಿಗಳು ಇವರತ್ತ ಸುಳಿಯಲಿಲ್ಲ. ಗುರುಗಳಾದರೂ ಅಷ್ಟೆ. ಅವರ ನೆರಳಿನ ಸಾಮಿಪ್ಯವೂ ಹೋಗಲಿಲ್ಲ. ಅರುಹೃದಯಿಗಳನ್ನು ಕಂಡು ಅರಿವಿನ ಬೀಜ ಬಿತ್ತಿದರು. ಮೊಳಕೆಯೊಡೆದು ಸಸಿಗಳಾಗಿವೆ. ಕೆಲವು ಮರಗಳಾಗಿ ಫಲಕ್ಕೆ ಬಂದಿವೆ ಆ ಮಾಗಿದ ಅರಿವಿನ ಫಲ ತನ್ನ ಕೆಲಸ ಮಾಡದೇ ಇರದು.

ಬಸವರಾಜ ಸ್ವಾಮಿ
ಸಂಪಾದಕ